# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯ Volume 149 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೩, ೨೦೧೪ (ಕಾರ್ತೀಕ ೧, ಶಕ ವರ್ಷ ೧೯೩೬) Bangalore, Thursday, October 23, 2014 (Karthika 1, Shaka Varsha 1936) | ಸಂಚಿಕೆ ೪೨ Issue 42 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಸವರಾಜ ಬೂದಪ್ಪ ಪೂಜಾರ, ಪಿಸಿ–100, ರಾಮನಗರ ಗ್ರಾಮಾಂತರ ಪೊಲೀಸ್ ಠಾಣೆ, ರಾಮನಗರ ಇವರ ಪರಿಷ್ಕರಣಾ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಮನಗರ ಜಿಲ್ಲೆ ಇವರ ಆದೇಶ ಸಂಖ್ಯೆ ಸಿಬ್ಬಂದಿ(2)/ಶಿಕ್ಷೆ/01/2011–12, (ಓ.ಬಿ ನಂ 301/2012) ದಿನಾಂಕ: 29.11.2012.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶಸಂಖ್ಯೆ:ಅಪೀಲಾ/133/ಶಿಕ್ಷೆ/2013 (ಓ.ಬಿ.ಸಂಖ್ಯೆ:14/2013–14) ದಿನಾಂಕ: 04.05.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26.06.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)20/2013–14 ದಿನಾಂಕ: 13.09.2013, 10.01.2014 ಮತ್ತು 25.03.2014
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 61 ಸಿಎನ್‌ಎಸ್ 2014 ದಿನಾಂಕ: 21.06.2014

**ಪ್ರಸ್ತಾವನೆ:**

ಶ್ರೀ ಬಸವರಾಜ ಬೂದಪ್ಪ ಪೂಜಾರ, ಪಿಸಿ–100, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ರಾಮನಗರ ಗ್ರಾಮಾಂತರ ಪೊಲೀಸ್ ಠಾಣೆ, ರಾಮನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಬಸವರಾಜ್ ಬಿ. ಪೂಜಾರ್, ಸಿಪಿಸಿ 100, ಈ ಹಿಂದೆ ಸಂಚಾರ ಪೊಲೀಸ್ ಠಾಣೆ ರಾಮನಗರ ಹಾಲಿ ಎಂ.ಕೆ. ದೊಡ್ಡಿ ಠಾಣೆ ಆದ ನೀವು ನಿಮ್ಮ ವಿರುದ್ಧ ಸಾರ್ವಜನಿಕರಿಂದ ಸಾಕಷ್ಟು ದೂರುಗಳು ಬಂದ ಕಾರಣ ಆಡಳಿತಾತ್ಮಕ ದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಹಾಗೂ ಮುಂದಿನ ಆದೇಶದವರೆಗೆ ಎಂ.ಕೆ. ದೊಡ್ಡಿ ಪೊಲೀಸ್ ಠಾಣೆಗೆ ಅನ್ಯಕರ್ತವ್ಯದ ಮೇಲೆ ನಿಯೋಜಿಸಲಾಗಿದ್ದು, ನಿಮ್ಮನ್ನು ಪಿಎಸ್‌ಐ ಸಂಚಾರ ಠಾಣೆ ರಾಮನಗರ ರವರು ದಿನಾಂಕ: 04.04.2012 ರಂದು ಬೆಳಿಗ್ಗೆ 10.00 ಗಂಟೆಗೆ ಡ್ಯೂಟಿ ಪಾಸ್‌ಪೋರ್ಟ್ ನೀಡಿ ಕರ್ತವ್ಯದಿಂದ ಬಿಡುಗಡೆಗೊಳಿಸಿ ಎಂ.ಕೆ. ದೊಡ್ಡಿ ಠಾಣೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಚಿಸಿ ಕಳುಹಿಸಿದ್ದರೂ ಸಹ ನೀವು ನಿಗದಿತ ಅವಧಿಯಲ್ಲಿ ಎಂ.ಕೆ.ದೊಡ್ಡಿ ಠಾಣೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ನಿಮ್ಮ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಅತ್ಯಂತ ಬೇಜವಾಬ್ದಾರಿ ತೋರಿರುವ ಆರೋಪ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ರಾಮನಗರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29.11.2012ರ ಆದೇಶದಲ್ಲಿ ಇವರಿಗೆ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು (01) ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿ ದಿನಾಂಕ: 16.04.2012ರಿಂದ ದಿನಾಂಕ: 05.07.2012ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದೆ ಹಾಗೂ ಇವರ ಅನಧಿಕೃತ ಗೈರು ಹಾಜರಿ ಅವಧಿ ದಿನಾಂಕ: 04.04.2012ರಿಂದ ದಿನಾಂಕ: 15.04.2012ರವರೆಗಿನ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04.05.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾವಣೆಯಾದಾಗ ಅಂತಹ ವರ್ಗಾವಣೆಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮದನ್ವಯ ಪ್ರಯಾಣದ ಅವಧಿಗೆ ಹಾಗೂ ರಜಾ ಅವಧಿಯನ್ನೊಳಗೊಂಡಂತೆ 10 ದಿನಗಳ ಅವಧಿಯನ್ನು ಬಳಸಿಕೊಳ್ಳಲು ಅವಕಾಶವಿದ್ದು ಆ.ಪೊ.ಅ.ರವರು ತಾವು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ವೈದ್ಯಕೀಯ ಪ್ರಮಾಣ ಸಲ್ಲಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 83ರನುಸಾರ ಮೈದ್ಯಕೀಯ ರಜೆಯೆಂದು ಪರಿಗಣಿಸಬಹುದಾಗಿದೆ. ಹಾಗೂ ಆ.ಪೊ.ಅ.ರವರು ದಿನಾಂಕ: 13.04.2012ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದರೂ ಸಹಾ ಸದರಿ ನೌಕರರನ್ನು ದಿನಾಂಕ: 16.04.2012ರಿಂದ ದಿನಾಂಕ 05.07.2012ರವರೆಗೆ ಅಮನತ್ತಿನಲ್ಲಿಟ್ಟಿರುವುದು ಕ್ರಮಬದ್ಧವಾಗಿರುವುದಿಲ್ಲ. ಈ ಕಾರಣಗಳ ಹಿನ್ನಲೆಯಲ್ಲಿ ಆ.ಪೊ.ಅ.ರವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ರದ್ದುಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶದ ಸಂಖ್ಯೆ: ಒಇ 79 ಪೊಸಿಅ 2013 ಬೆಂಗಳೂರು, ದಿನಾಂಕ: 02.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವರಾಜ ಬೂದಪ್ಪ ಪೂಜಾರ, ಪಿಸಿ–100, ರಾಮನಗರ ಗ್ರಾಮಾಂತರ ಪೊಲೀಸ್ ಠಾಣೆ, ರಾಮನಗರ ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ ಆ.ಪೊ.ಅ.ರವರ ಅನಧಿಕೃತ ಗೈರು ಹಾಜರಿ ಅವಧಿ ದಿನಾಂಕ: 04.04.2012ರಿಂದ ದಿನಾಂಕ 15.04.2012ರವರೆಗಿನ ಅವಧಿಯನ್ನು ವೈದ್ಯಕೀಯ ಕಾರಣಗಳ ಮೇಲಿನ ರಜೆಯೆಂದು ಹಾಗೂ ದಿನಾಂಕ: 16.04.2012ರಿಂದ ದಿನಾಂಕ 05.07.2012ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100(3)ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ

PR. 568

**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಿವಶರಣಪ್ಪಾ, ಎಎಸ್ಐ. ರೋಜಾ ಪೊಲೀಸ್ ಠಾಣೆ, ಗುಲ್ಬರ್ಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ ಇವರ ಆದೇಶ ಸಂಖ್ಯೆ ಇವಿ–39/2011, (ಡಿಓಬಿ ಸಂ 1344/2011) ದಿನಾಂಕ: 11.11.2011.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/97/ಈವ/2011/695 (ಅ.ಪು.ಸಂ.234/ಈವ/2012)ದಿನಾಂಕ: 09.05.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11.08.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)42/2013–14 ದಿನಾಂಕ:29.10.2013, ಮತ್ತು 19.03.2014.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 44 ಸಿಎನ್ಎಸ್ 2014 ದಿನಾಂಕ:21.06.2014

**ಪ್ರಸ್ತಾವನೆ:**

ಶ್ರೀ ಶಿವಶರಣಪ್ಪಾ, ಎಎಸ್ಐ, (ಇನ್ನೂ ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ರೋಜಾ ಪೊಲೀಸ್ ಠಾಣೆ, ಗುಲ್ಬರ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನಿಮಗೆ ಹಂಚಿಕೆಯಾದ ಪೊಲೀಸ್ ವಸತಿ ಗೃಹ ಸಂಖ್ಯೆ 7 (ಎ) ನೇದ್ದನ್ನು ತೆರವು ಮಾಡುವಾಗ ಸಂಬಂಧಪಟ್ಟವರ ಗಮನಕ್ಕೆ ತರದೆ ಬೇರೆಯವರಿಗೆ ವಾಸಿಸಲು ನೀಡಿ ತಮ್ಮ ಕರ್ತವ್ಯದಲ್ಲಿ ಅತೀವ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 11.11.2011ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಇವರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡಿ, ಇವರ ಅಮಾನತ್ತಿನ ಅವಧಿ ದಿನಾಂಕ: 27.08.2011 ರಿಂದ 11.11.2011ರ ವರೆಗೆ ಅಮಾನತ್ತೆಂದು ಪರಿಗಣಿಸಿ, ಆದೇಶಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು. ಈಶಾನ್ಯ ವಲಯ ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09.05.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ. ಶ್ರೀ ಶಿವರಣಪ್ಪ ಮತ್ತು ಇನ್ನೋರ್ವ ಆರೋಪಿತರಾದ ಎಎಸ್ಐ, ಶ್ರೀ ಶಿವಪುತ್ರಪ್ಪ ಮಂಠಾಳೆ, ಇವರ ವಿರುದ್ಧ ಒಂದೇ ತೆರನಾದ ಮಾನದಂಡವನ್ನು ಉಪಯೋಗಿಸದೇ ಇರುವುದು ಕಂಡುಬರುತ್ತದೆ. ಶಿಸ್ತು ಪ್ರಾಧಿಕಾರವು ಇದರಲ್ಲಿ ತಮ್ಮ ವೈಯಕ್ತಿಕ ಅಭಿಪ್ರಾಯಗಳನ್ನು ದಂಡನೆಯ ಆದೇಶದಲ್ಲಿ ಅಳವಡಿಸಿರುವುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಆ.ಪೊ.ಅ. ರವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ಆದೇಶವನ್ನು ರದ್ದುಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 115 ಪೊಸಿಅ 2013 ಬೆಂಗಳೂರು, ದಿನಾಂಕ: 01.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಶರಣಪ್ಪಾ, ಎಎಸ್ಐ, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗ ಜಿಲ್ಲೆ ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)(a)(i)ರನ್ವಯ ಇವರಿಗೆ ವಾಗ್ದಂಡನೆ (censure) ವಿಧಿಸಲು ಹಾಗೂ ಅಮಾನತ್ತಿನ ಅವಧಿ ದಿನಾಂಕ: 27.08.2011ರಿಂದ ದಿನಾಂಕ: 11.11.2011ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ

PR. 569

**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಗೋವಿಂದಪ್ಪ, ಪಿಸಿ, ಚಾಲಕ ಸಂಖ್ಯೆ–275, ವಾಹನ ಸಾರಿಗೆ ವಿಭಾಗ, 8ನೇ ಪಡೆ, ಕೆಎಸ್ಆರ್‌ಪಿ, ಶಿವಮೊಗ್ಗ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆಎಸ್ಆರ್‌ಪಿ, ಶಿವಮೊಗ್ಗ, ಇವರ ಆದೇಶ ಸಂಖ್ಯೆ: 01/ಸಿಬ್ಬಂದಿ(2)ನಿಯಮ–6/2012–13 (ಓ.ಬಿ.ಸಂಖ್ಯೆ: 202/2013–14) ದಿನಾಂಕ: 30.07.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/08/2013–14, ದಿನಾಂಕ: 24.10.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26.12.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)79/2013–14 ದಿನಾಂಕ: 14.02.2014,
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 38 ಸಿಎನ್‌ಎಸ್ 2014 ದಿನಾಂಕ: 04.06.2014

**ಪ್ರಸ್ತಾವನೆ:–**

ಶ್ರೀ ಗೋವಿಂದಪ್ಪ, ಪಿ.ಸಿ. ಚಾಲಕ ಸಂಖ್ಯೆ–275, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ವಾಹನ ಸಾರಿಗೆ ವಿಭಾಗ, 8ನೇ ಪಡೆ, ಕೆಎಸ್ಆರ್‌ಪಿ. ಶಿವಮೊಗ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಅಶಿಸ್ತು ಹಾಗೂ ಬೇಜುವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿದ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

1. ಶ್ರೀ ಗೋವಿಂದಪ್ಪ ಪಿ.ಸಿ/ಚಾಲಕ ಸಂಖ್ಯೆ–275, ವಾಹನ ಸಾರಿಗೆ ವಿಭಾಗ, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಆದ ನಿಮ್ಮನ್ನು ದಿನಾಂಕ: 25.07.2012ರಂದು ಘಟಕದ ಅಧಿಕಾರಿ ಶ್ರೀ ಆಂಜನೇಯಲು ಆರ್.ಪಿ.ಐ. ಮತ್ತು ಶ್ರೀ ಹೆಚ್.ಎಸ್.ಶ್ರೀಧರ, ಪಿಸಿ–678, ಇವರುಗಳನ್ನು ಕರೆದುಕೊಂಡು ಅಂತರ ಪಡೆಗಳ ಕರ್ತವ್ಯ ಕೂಟ–2012ರ ಸಂಬಂಧ ಘಟಕದ ವಾಹನ ಜೀಪ್ ಸಂಖ್ಯೆ ಕೆಎ–14 ಜಿ–644ರಲ್ಲಿ ಬೆಂಗಳೂರಿಗೆ ಕರೆದುಕೊಂಡು ಹೋಗಲು ನಿಯೋಜಿಸಲಾಗಿರುತ್ತದೆ. ಅದರಂತೆ ನೀವು ಪಡೆಯ ಕೇಂದ್ರ ಸ್ಥಾನ ಶಿವಮೊಗ್ಗದಿಂದ ಬೆಂಗಳೂರುಗೆ ತೆರಳುತ್ತಿರುವಾಗ ಮಾರ್ಗ ಮಧ್ಯೆ ತಿಪಟೂರು ತಾಲ್ಲೂಕು ಕರಡಿ ಗ್ರಾಮ ಎಂಬ ಸ್ಥಳದಲ್ಲಿ ವಾಹನವನ್ನು ಅತೀ ವೇಗ ಮತ್ತು ಅಜಾಗರೂಕತೆಯಿಂದ ಚಾಲನೆ ಮಾಡಿ ಎದುರುಗಡೆಯಿಂದ ಬರುತ್ತಿದ್ದ ಖಾಸಗಿ ವಾಹನ ಸಂಖ್ಯೆ ಕೆಎ–44 ಎಂ–2088 ಟಾಟಾ ಗ್ರಾಂಡ್ ವಾಹನಕ್ಕೆ ಡಿಕ್ಕಿ ಹೊಡೆದ ಪರಿಣಾಮವಾಗಿ ವಾಹನವು ಅಪಘಾತವಾಗಲು ಹಾಗೂ ಜಖಂಗೊಳ್ಳಲು ಕಾರಣರಾಗಿ ತನ್ಮೂಲಕ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ.
2. ಶ್ರೀ ಗೊವಿಂದಪ್ಪ ಪಿ.ಸಿ./ಚಾಲಕ ಸಂಖ್ಯೆ–275, ವಾಹನ ಸಾರಿಗೆ ವಿಭಾಗ 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಆದ ನಿಮಗೆ ವಹಿಸಲಾಗಿದ್ದ ವಾಹನ ಜೀಪ್ ಸಂಖ್ಯೆ ಕೆಎ–14 ಜಿ–644ನ್ನು ಅಜಾಗರೂಕತೆ ಅತೀ ವೇಗ ಹಾಗೂ ಬೇಜವಾಬ್ದಾರಿಯಿಂದ ಚಾಲನೆ ಮಾಡಿ ಅಪಘಾತಕ್ಕೀಡು ಮಾಡಿದ ಪರಿಣಾಮವಾಗಿ ವಾಹನದಲ್ಲಿದ್ದ ಶ್ರೀ ಅಂಜನೇಯಲು, ಆರ್.ಪಿ.ಐ. ಮತ್ತು ಶ್ರೀ ಹೆಚ್.ಎಸ್. ಶ್ರೀಧರ, ಪಿ.ಸಿ–678 ಇವರಿಗೆ ತೀವ್ರ ಸ್ವರೂಪದ ಗಾಯಗೊಂಡಿರುತ್ತಾರೆ. ಇ ಸಂಬಂಧ ತಿಪಟೂರಿನ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದಿನಾಂಕ 25.07.2012ರಂದು ಅಪರಾಧ ಮೊಕದ್ದಮೆ ಸಂಖ್ಯೆ 77/2012 ಕಲಂ–279, 337, ಐ.ಪಿ.ಸಿ–1860 ರೀತ್ಯಾ ಪ್ರಕರಣ ದಾಖಲಾಗಲು ಕಾರಣರಾಗಿ ತನ್ಮೂಲಕ ತೀವ್ರ ಕರ್ತವ್ಯ ನಿರ್ಲಕ್ಷ್ಯತೆ ಅಶಿಸ್ತು ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪದ ಶಿಸ್ತು ಪಾಧಿಕಾರ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆ.ಎಸ್‌ಆರ್‌ಪಿ, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 30.07.2013ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಆ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 01 (ಒಂದು) ವರ್ಷ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 24.10.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ. ರವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ನೀಡಿದ್ದರೂ. ಶಿಸ್ತು ಪ್ರಾಧಿಕಾರವು ಇವರಿಗೆ ದಂಡನೆ ವಿಧಿಸಿರುವುದು ನ್ಯಾಯ ಸಮ್ಮತವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸುವ ಕುರಿತಂತೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ಲೊಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 1 ಪೊಸಿಅ 2014 ಬೆಂಗಳೂರು, ದಿನಾಂಕ: 18.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋವಿಂದಪ್ಪ, ಪಿಸಿ, ಚಾಲಕ ಸಂಖ್ಯೆ–275, ವಾಹನ ಸಾರಿಗೆ ವಿಭಾಗ, 8ನೇ ಪಡೆ, ಕೆಎಸ್‌ಆರ್‌ಪಿ, ಶಿವಮೊಗ್ಗ ಇವರನ್ನು ನಿರ್ದೋಷಿಯೆಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

PR. 570

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ಪ್ರಕಟಣೆ**

**ಸಂಖ್ಯೆ ಲೋಇ 130 ಇಎಪಿ 2014, ದಿನಾಂಕ 25–07–2014**

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ವಿಶ್ವಬ್ಯಾಂಕ್ ನೆರವಿನೊಂದಿಗೆ ಅಭಿವೃದ್ಧಿ ಪಡಿಸಲಾಗುವ ರಸ್ತೆಗಳ ನಿರ್ಮಾಣ ಕಾಮಗಾರಿಗಳಿಗೆ ಮುಖ್ಯ ಇಂಜಿನಿಯರ್, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರನ್ನು ಕರ್ನಾಟಕ ಹೆದ್ದಾರಿ ಅಧಿನಿಯಮ 1964 ರ ಅಡಿಯಲ್ಲಿ ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ) ನೇಮಿಸುವ ಬಗ್ಗೆ.

**ಉಲ್ಲೇಖ:–** ಕರ್ನಾಟಕ ರಾಜ್ಯ ಪತ್ರದ ಪ್ರಕಟಣೆ ಸಂಖ್ಯೆ: ಪಿ.ಡಬ್ಲ್ಯುಡಿ:23:ಆರ್.ಡಿ.ಎಫ್:2014, ದಿನಾಂಕ: 22–09–2008

ಉಲ್ಲೇಖಿತ ದಿನಾಂಕ: 22-09-2008ರ ಕರ್ನಾಟಕ ರಾಜ್ಯ ಪತ್ರದಲ್ಲಿನ ಪ್ರಕಟಣೆಯಲ್ಲಿ ದಿನಾಂಕ: 24-11-2007 ರಂದು ಹೊರಡಿಸಲಾಗಿದ್ದ ಪ್ರಕಟಣೆಯನ್ನು ಭಾಗಶಃ ಮಾರ್ಪಡಿಸಿ ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆಯ ರಾಜ್ಯ ಹೆದ್ದಾರಿಗಳು (ರಾಜ್ಯ ಹೆದ್ದಾರಿ (ವಿಶೇಷ) ಹೊರತುಪಡಿಸಿ) ಮತ್ತು ಜಿಲ್ಲಾ ಮುಖ್ಯ ರಸ್ತೆಗಳಿಗೆ ಅನ್ವಯವಾಗುವಂತೆ ಇಲಾಖೆಯ ಆಯಾ ವಿಭಾಗಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು/ ರಸ್ತೆ ಭಾಗಗಳಿಗೆ ಆಯಾ ವಿಭಾಗದ ಕಾರ್ಯನಿರ್ವಾಹಕ ಇಂಜಿನಿಯರ್‌ರವರನ್ನು ಹೆದ್ದಾರಿ ಪ್ರಾಧಿಕಾರಿಯೆಂದು ಪುನರ್ ನೇಮಿಸಲಾಗಿದೆ. ಈ ಪ್ರಕಟಣೆಯು ಕರ್ನಾಟಕ ಹೆದ್ದಾರಿ ಕಾಯ್ದೆ ಪ್ರಕರಣ 4 ಕ್ಕೆ ಸಂಬಂಧಿಸಿದಂತೆ ಈ ಹಿಂದೆ ಹೊರಡಿಸಲಾಗಿದ್ದ ಎಲ್ಲಾ ಪ್ರಕಟಣೆಗಳನ್ನು ಅತಿಕ್ರಮಿಸಿರುತ್ತದೆ. (Supercedes)

ಮುಂದುವರೆಂದು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ವಿಶ್ವಬ್ಯಾಂಕ್ ನೆರವಿನೊಂದಿಗೆ ಅಭಿವೃದ್ಧಿ ಪಡಿಸಲು ಯೋಜಿಸಿದ್ದು, ಈ ಸಂಬಂಧ ಪ್ರಕಟಣೆಯೊಂದಿಗೆ ಅನುಬಂಧದಲ್ಲಿ ಸೂಚಿಸಿರುವ ರಾಜ್ಯ ಹೆದ್ದಾರಿಗಳ ಸರಪಳಿಯ ಭಾಗಗಳಿಗೂ ಸಹ ಅನ್ವಯಿಸುವಂತೆ ಮುಖ್ಯ ಇಂಜಿನಿಯರ್ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರನ್ನು ಕರ್ನಾಟಕ ಹೆದ್ದಾರಿ ಅಧಿನಿಯಮ 1964 ರ ಪ್ರಕರಣ-4 ರಡಿ ತಾತ್ಕಲಿಕವಾಗಿ "ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ)" ಮತ್ತು ಸದರಿ ಕಾಮಗಾರಿಗಳು ಪೂರ್ಣಗೊಂಡು ಸಂಬಂಧ ಪಟ್ಟ ವಿಭಾಗದ ಕಾರ್ಯಪಾಲಕ ಅಭಿಯಂತರವರಿಗೆ ಮರು ಹಸ್ತಾಂತರಿಸಲಾಗುವವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ

**ಇಂ. ವಿಜಯ್.ಭೀ. ಚಂದಾಪುರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಬಾಹ್ಯ ಅನುದಾನಿತ ಯೋಜನೆಗಳು (EAP),
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಇಲಾಖೆ

**ಅನುಬಂಧ**

**ಪ್ರಕಟಣೆ ಸಂಖ್ಯೆ: ಲೋಇ:130:ಇಎಪಿ:2014, ದಿನಾಂಕ: 25-07-2014 ರಡಿಯಲ್ಲಿ ಈ ಕೆಳಗೆ ತಿಳಿಯಪಡಿಸಿದ ರಾಜ್ಯ ಹೆದ್ದಾರಿಯ ಭಾಗಗಳಿಗೆ ಮುಖ್ಯ ಇಂಜಿನಿಯರ್, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ರವರನ್ನು "ಹೆದ್ದಾರಿ ಪ್ರಾಧಿಕಾರಿ" ಯನ್ನಾಗಿ ನೇಮಿಸಲಾಗಿದೆ.**

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿಯ ಹೆಸರು | ರಾಹೆ ಸಂಖ್ಯೆ | ಸರಪಳಿ | |
|---|---|---|---|---|
| | | | ಇಂದ | ವರೆಗೆ |
| 1. | ಬಾಗೇವಾಡಿಯಿಂದ (ರಾಹೆ-4 ರಿಂದ ಪ್ರಾರಂಭ) ಸಂಪಗಾಂವ್, ಬೈಲಹೊಂಗಲ, ಬೇವಿನಕೊಪ್ಪ ಮತ್ತು ಬೆಳವಾಡಿ ಮುಖಾಂತರ ಸವದತ್ತಿದರೆಗೆ ರಸ್ತೆ ಅಭಿವೃದ್ಧಿ | ರಾಹೆ-31 | 177.200 | 153.500 |
| | | ರಾಹೆ-01 | 421.200 | 414.00 |
| | | ರಾಹೆ-73 | 185.500 | 192.050 |
| | | ರಾಹೆ-30 | 227.700 | 201.300 |
| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿಯ ಹೆಸರು | ರಾಹೆ ಸಂಖ್ಯೆ | ಸರಪಳಿ | |
| | | | ಇಂದ | ವರೆಗೆ |
| 2. | ಬೀದರ್‌ದಿಂದ (ರಾಹೆ-9 ರಿಂದ ಪ್ರಾರಂಭ) ಕಾಶಿಮ್‌ಪುರ್, ಎಕ್ಕೆಳ್ಳಿ, ತುಮಕುಂಟ ಮತ್ತು ಕೊಲ್ಲೂರು ಮುಖಾಂತರ ಚಿಂಚೋಳಿವರೆಗೆ ರಸ್ತೆ ಅಭಿವೃದ್ಧಿ | ರಾಹೆ-15 | 47.000 | 108.100 |
| 3. | ಹಾಸನದಿಂದ ಸತ್ಯಮಂಗಲ, ಅರಕಲಗೂಡು, ಬರಗೂರು, ನಿಲವಾಗಿಲು, ರಾಮನಾಥಪುರ ಮತ್ತು ಜೆ ಹೊಸಹಳ್ಳಿ ಮುಖಾಂತರ ಪಿರಿಯಾಪಟ್ಟಣವರೆಗೆ ರಸ್ತೆ ಅಭಿವೃದ್ಧಿ | ರಾಹೆ-21 | 30.000 | 60.700 |
| | | | 61.000 | 78.000 |
| | | | 81.800 | 110.800 |
| 4. | ಹಿರೇಕೆರೂರುದಿಂದ ಚಿಕ್ಕೇರೂರು, ಹಂಸಬಾವಿ, ಕೋಡ ಮತ್ತು ಹಲಗೇರಿ ಮುಖಾಂತರ ರಾಣೆಬೆನ್ನೂರುವರೆಗೆ ರಸ್ತೆ ಅಭಿವೃದ್ಧಿ | ರಾಹೆ-62 | 51.700 | 29.000 |
| | | ರಾಹೆ-76 | 175.700 | 148.500 |
| | | ರಾಹೆ-57 | 226.500 | 219.200 |
| 5. | ಮುಂಡರಗಿಯಿಂದ ಕೊರ್ಲಹಳ್ಳಿ, ಕಾಗನೂರು, ಹೂವಿನಹಡಗಲಿ, ನಾಗತಿ ಬಸಾಪುರ ಮತ್ತು ಕುಲಹಳ್ಳಿ ಮುಖಾಂತರ ಹರಪನಹಳ್ಳಿವರೆಗೆ ರಸ್ತೆ ಅಭಿವೃದ್ಧಿ | ರಾಹೆ-45 | 173.500 | 199.500 |
| | | ರಾಹೆ-47 | 351.100 | 330.800 |
| 6. | ಹುನುಗುಂದದಿಂದ ತಂಗಡಗಿ, ಮುದ್ದೇಬಿಹಾಳ, ಕುಂಟೋಜಿ, ಮೂಖಿಹಾಳ ಮತ್ತು ಮಿಣಜಗಿ ಮುಖಾಂತರ ತಾಳಿಕೋಟವರೆಗಿನ ರಸ್ತೆ ಅಭಿವೃದ್ಧಿ | ರಾಹೆ-60 | 0.000 | 33.000 |
| | | ರಾಹೆ-41 | 146.800 | 147.800 |
| | | ರಾಹೆ-60 | 1.000 | 25.000 |
| 7. | ರಾಯಭಾಗದಿಂದ ಚಿಂಚಳಿ ಮುಖಾಂತರ ಕುಡಚಿವರೆಗೆ ರಸ್ತೆ ಅಭಿವೃದ್ಧಿ | ರಾಹೆ-73 | 21.500 | 43.500 |

**ಇಂ. ವಿಜಯ್. ಭೀ. ಚಂದಾಪುರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಬಾಹ್ಯ ಅನುದಾನಿತ ಯೋಜನೆಗಳು (EAP),
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಇಲಾಖೆ

**PR. 571**
**SC. 100**

## FINANCE SECRETARIAT

Sub : Grant of House Rent Allowance and City Compensatory Allowances to Government employees working in Hunasamaranahalli and Suggatta villages under Yelahanka Hobli of Bangalore Urban District-reg.

Read:
1. G.O.No. FD 4 SRP 80, dated: 22.03.1980
2. Order No. ADM.MSC.2.CR.188-87, dated: 14.07.1989
3. G.O. No. FD 19 SRP 99, dated: 10.08.1999
4. G.O.No. FD 4 SRP 2009, dated: 31.10.2009
5. G.O. No. FD 7 SRP 2012, dated: 21.04.2012
6. G.O. No. FD 18 SRP 2012, dated: 19.10.2012
7. G.O. No. FD 9 SRP 2013, dated: 18.03.2013
8. G.O. No. FD 14 SRP 2013, dated: 02.09.2013
9. Report of the Deputy Commissioner, Bangalore Urban District No. MAG(5)MHCR 7/2012-13,dated 06.03.2013
10. Representation from the Karnataka Primary School Teachers Association, dated: 17.05.2014.

**PREAMBLE :**

In G.0. dated 22nd March 1980 read at (1) above, orders were issued granting Bangalore City rate of HRA to State Government employees who were posted to any place which were situated within 8 kms from the periphery of the municipal limits of the erstwhile Bangalore City Corporation. Further, sequel to the orders of the Hon 'ble KAT in A.No. 2769/1988 a list of villages falling within 8 kms from the periphery of the municipal limits of Bangalore City Corporation was published in Annexure to the order dated: 14.07.1989 read at (2) above.

In G.O. dated: 31.10.2009 read at (4) above, it was ordered that with effect from 1st October 2009, the Government employees posted to any place situated within the jurisdiction of BBMP only are entitled to for city rates of HRA and CCA. Various Associations of Karnataka State Government Employees had submitted representations to the Government requesting for grant of HRA & CCA as per the decision of the Hon 'ble Karnataka Administrative Tribunal in A.Nos. 314-356/2010, 988-1210/10 etc. Hence, in G.O. dated: 18.03.2013 read at (7) above, orders were issued granting the benefit of HRA.& CCA at Bangalore City Rates to the State Government employees working in 5 villages coming under Dasanapura Hobli of Bangalore North Taluk.

Further, as per the directions of the Hori'bleHigh Court given in W.P. No. 2945-59/2014 the Petitioners therein and also certain Teachers Associations have submitted representations to the Government contending that as per the G.O. dated: 10.08.1999 read at (3) above the Government employees working at Hunasamaranahalli and Suggatta villages of Yelahanka Hobli, Bangalore Urban District were getting the benefit of HRA & CCA at Bangalore City Rates and the same is denied in terms of the G.O. dated: 31.10.2009 read at (4) above and has therefore requested the Government to continue them the said benefit.

In view of the undertaking given by the Government in A.Nos. 314-356/2010, 988-1210/2010, 489-498/2010 etc., before the Hori'ble Karnataka Administrative Tribunal and in compliance of the directions of the Hon'ble High Court of Karnataka in W.P. No. 2945-2959/2014, Government considers it necessary to continue to allow the benefit of HRA & CCA at Bangalore City rates to the Government employees working in Hunasamaranahalli and Suggatta Villages of Yelahanka Hobli in Bangalore Urban District. Accordingly the following orders are issued.

### GOVERNMENT ORDER NO. FD 8 SRP 2013, BANGALORE, DATED: 20-06-2014

Government are pleased to continue the payment of HRA & CCA at Bangalore City rates to the Government employees working at Hunasamaranahalli and Suggatta Villages situated in Yelahanka Hobli of Bangalore Urban District.

2. The other terms and conditions stipulated in G.O. No. FD 18 SRP 2012, dated 19.10.2012 for grant of HRA & CCA shall continue to apply.

By Order and in the name of the Governor of Karnataka,

**SUNDARA RAJA GUPTHA**

Joint Secretary to Government,

Finance Department (Service-2)

**P.R. 572**
**S.C. 100**

## ಕಂದಾಯ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಕಂಇ 07 ಭೂಸ್ವಾರಾ 2014 ಬೆಂಗಳೂರು, ದಿನಾಂಕ: 09.06.2014**

**ವಿಷಯ:** ಭಾರತ ಸರ್ಕಾರವು "The Right to Fair Compensation and Transparency in Land Acquisition Rehabilitation and Resettlement Act-2013"ನ್ನು ಜಾರಿಗೆ ತಂದಿರುವ ಹಿನ್ನೆಲೆಯಲ್ಲಿ ಈ ಹಿಂದೆ ಭೂಸ್ವಾಧೀನ ಕಾಯ್ದೆ 1894ರಡಿಯಲ್ಲಿ ಪ್ರಾರಂಭಗೊಂಡಿರುವ ಪ್ರಕ್ರಿಯೆಗಳನ್ನು ಪೂರ್ಣಗೊಳಿಸುವ ಕುರಿತು ಪರಿಷ್ಕೃತ ಮಾರ್ಗಸೂಚಿಗಳು.

ಹೊಸ ಭೂಸ್ವಾಧೀನ ಕಾಯ್ದೆ "The Right to Fair Compersation and Transparency in Land Acquisition Rehabilitation and Resettlement Act-2013" ದಿನಾಂಕ: 01–01–2014 ರಿಂದ ಜಾರಿಗೆ ಬಂದಿರುವ ಹಿನ್ನೆಲೆಯಲ್ಲಿ ಈ ಹಿಂದೆ ಭೂಸ್ವಾಧೀನ ಕಾಯ್ದೆ 1894 ರಡಿಯಲ್ಲಿ ಪ್ರಾರಂಭಗೊಂಡಿರುವ ಪ್ರಕ್ರಿಯೆಗಳನ್ನು ಪೂರ್ಣಗೊಳಿಸುವ ಕುರಿತು ಕೆಲವು ಮಾರ್ಗಸೂಚಿಗಳನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 7 ಭೂಸ್ವಾರಾ 2014 ದಿನಾಂಕ: 05.03.2014ರಲ್ಲಿ ಹೊರಡಿಸಲಾಗಿತ್ತು.

ಸದರಿ ಸುತ್ತೋಲೆಯ ಪ್ಯಾರಾ 6ರಲ್ಲಿ "ಪ್ರಾಥಮಿಕ ಅಧಿಸೂಚನೆ ಹೊರಡಿಸಿದ ಪ್ರಕರಣದಲ್ಲಿ ಮುಂದಿನ ಪ್ರಕ್ರಿಯೆಗಳನ್ನು ಅಂದರೆ, ಅಂತಿಮ ಘೋಷಣೆಯನ್ನು ಹಳೆಯ ಕಾಯ್ದೆ ಕಲಂ 6ರ ಪ್ರಕಾರವೇ ಹೊರಡಿಸಲು ಅನುಮತಿಸುವುದರಿಂದ, ಹೊಸ ಕಾಯ್ದೆ ಕಲಂ–30 ಉಪ ಕಲಂ (3)ರಲ್ಲಿ ಹೇಳುವಂತೆ ಶೇ. 12 ರಷ್ಟು ಹೆಚ್ಚಿನ ಮೊತ್ತವನ್ನು ಮಾರುಕಟ್ಟೆ ಧಾರಣೆ ಮೇಲೆ Social Impact Assessment Study, ಬಗ್ಗೆ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮಂಜೂರು ಮಾಡಲು ಹೊಸ ಕಾಯ್ದೆ ಅಡಿಯಲ್ಲಿ ಐತೀರ್ಪು ರಚಿಸುವಾಗ ಅವಕಾಶವಿರುವುದಿಲ್ಲ" ಎಂದು ತಿಳಿಸಲಾಗಿತ್ತು.

ಪ್ರಸ್ತುತ ಈ ಕುರಿತು ಕಾನೂನು ಇಲಾಖೆಯ ಅಭಿಪ್ರಾಯ ಪಡೆಯಲಾಗಿದ್ದು, ಅದರಂತೆ "ಪ್ರಾಥಮಿಕ ಅಧಿಸೂಚನೆ ಹೊರಡಿಸಿದ ಪ್ರಕರಣಗಳಲ್ಲಿ ಮುಂದಿನ ಪ್ರಕ್ರಿಯೆಗಳನ್ನು ಅಂದರೆ, ಅಂತಿಮ ಘೋಷಣೆಯನ್ನು ಹಳೆಯ ಕಾಯ್ದೆ ಕಲಂ 6ರ ಪ್ರಕಾರವೇ ಹೊರಡಿಸಲು ಅನುಮತಿಸಿರುವುದರಿಂದ, ಹೊಸ ಕಾಯ್ದೆ ಕಲಂ–69ರ ಉಪ ಕಲಂ (2)ರಲ್ಲಿ ಹೇಳುವಂತೆ ಶೇ. 12 ರಷ್ಟು ಹೆಚ್ಚಿನ ಮೊತ್ತವನ್ನು ಮಾರುಕಟ್ಟೆ ಧಾರಣೆ ಮೇಲೆ ಹಳೆಯ ಕಾಯ್ದೆಯ ಪ್ರಾಥಮಿಕ ಅಧಿಸೂಚನೆ ಅಂದರೆ 4(1) ಅಧಿಸೂಚನೆ ಪ್ರಕಟಿಸಿದ ದಿನಾಂಕದಿಂದ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಂಡಿರುವ ದಿನಾಂಕ ಅಥವಾ ಕಲೆಕ್ಟರ್ ಐತೀರ್ಪು ರಚಿಸಿದ ದಿನಾಂಕದವರೆಗೆ ಇವೆರಡರಲ್ಲಿ ಯಾವುದು ಮೊದಲು ಸಂಭವಿಸುತ್ತದೆಯೋ ಅದನ್ನು ಪರಿಗಣನೆಗೆ ತೆಗೆದುಕೊಂಡು ಐತೀರ್ಪು ರಚಿಸಲು ಅವಕಾಶವಿರುತ್ತದೆ" ಎಂದು ತಿಳಿಸಿದೆ.ಅದರಂತೆ ಕ್ರಮವಹಿಸತಕ್ಕದ್ದು.

ಮುಂದುವರೆದು ಸರ್ಕಾರದ ಸುತ್ತೋಲೆ ದಿನಾಂಕ: 05.03.2014ರಲ್ಲಿನ ಉಳಿದ ಮಾರ್ಗಸೂಚಿಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.ಅದರನ್ವಯ ಮುಂದುವರೆಯತಕ್ಕದ್ದು.

**ಶಂಕರಗೌಡ ಸಿ.ದೊಡ್ಡಮನಿ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ– 1 & 3).

**PR. 563**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಸಿಆಸುಇ 57 ಸೇಸ್ಥ 2014, ಬೆಂಗಳೂರು, ದಿನಾಂಕ : 01–07–2014.**

**ವಿಷಯ :** ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012ನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ : 10–05–2013ರ ಸುತ್ತೋಲೆ ಸಂಖ್ಯೆ : ಸಿಆಸುಇ 44 ಸೇಸ್ಥ 2013.
2. ದಿನಾಂಕ : 19–08–2013ರ ಸುತ್ತೋಲೆ ಸಂಖ್ಯೆ : ಸಿಆಸುಇ 94 ಸೇಸ್ಥ 2013.

ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012ನ್ನು ದಿನಾಂಕ : 15–02–2013ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಜಾರಿಗೊಳಿಸಲಾಗಿರುತ್ತದೆ. ಮೇಲ್ಕಂಡ ಅಧಿನಿಯಮದ ಸೆಕ್ಷನ್ 3(2)ರಲ್ಲಿ "ರಾಜ್ಯ ಸರ್ಕಾರವು ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗಾಗಿ (1)ನೇ ಉಪಪ್ರಕರಣದ ಉದ್ದೇಶಕ್ಕಾಗಿ ಎಲ್ಲಾ ಸಂಸ್ಥೆಗಳ ಅರ್ಹ ದಿನಗೂಲಿ ನೌಕರರ ಹೆಸರುಗಳನ್ನು ಅಧಿಸೂಚಿಸತಕ್ಕದ್ದು" ಎಂದು ನಮೂದಿಸಲಾಗಿದೆ. ಈ ಅಧಿನಿಯಮವನ್ನು ಅನುಷ್ಠಾನಗೊಳಿಸುವ ಸಂಬಂಧ ಉಲ್ಲೇಖಿತ ದಿನಾಂಕ : 10–05–2013ರ ಮತ್ತು ದಿನಾಂಕ : 19–08–2013ರ ಸುತ್ತೋಲೆಗಳಲ್ಲಿ ಸೂಚನೆಗಳನ್ನು ನೀಡಲಾಗಿದೆ.

ಮೇಲ್ಕಂಡ ಸುತ್ತೋಲೆಗಳನ್ವಯ ಅರ್ಹ ದಿನಗೂಲಿ ನೌಕರರನ್ನು ಗುರುತಿಸಿ ಅಧಿಸೂಚಿಸಬೇಕಾಗಿದ್ದು, ಈ ಬಗ್ಗೆ ಕೆಲವು ಇಲಾಖೆಗಳಲ್ಲಿ ಇನ್ನೂ ಕ್ರಮ ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಆದುದರಿಂದ, ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012ರನ್ವಯ ಅರ್ಹ ದಿನಗೂಲಿ ನೌಕರರನ್ನು ಗುರುತಿಸಿ ಸಂಬಂಧಪಟ್ಟ ಇಲಾಖಾ ಸಚಿವರ ಪೂರ್ವಾನುಮೋದನೆಯೊಂದಿಗೆ ಅಧಿಸೂಚನೆಯನ್ನು ಹೊರಡಿಸಲು ಕೂಡಲೇ ಕ್ರಮ ಕೈಗೊಳ್ಳುವಂತೆ ಹಾಗೂ ಇಂತಹ ಅಧಿಸೂಚನೆಗಳ ಪ್ರತಿಗಳನ್ನು ಈ ಇಲಾಖೆಗೆ ಕಳುಹಿಸಿ ಈಗಾಗಲೇ ಅರ್ಹ ದಿನಗೂಲಿ ನೌಕರರನ್ನು ಗುರುತಿಸಿ ಅಧಿಸೂಚನೆ ಹೊರಡಿಸಿರುವ ಇಲಾಖೆಗಳು ತಮ್ಮ ಇಲಾಖೆಯಲ್ಲಿ ಈ ಕಾರ್ಯವು ಪೂರ್ಣಗೊಂಡಿದ್ದಲ್ಲಿ, ಅಧಿಸೂಚನೆ ಹೊರಡಿಸುವ ಕಾರ್ಯವು ಪೂರ್ಣಗೊಂಡ ಬಗ್ಗೆ ವರದಿಯನ್ನು ಸಲ್ಲಿಸುವಂತೆ ಮತ್ತು ಅರ್ಹ ದಿನಗೂಲಿ ನೌಕರರು ಇಲ್ಲದಿದ್ದಲ್ಲಿ ಅಂತಹ ಇಲಾಖೆಗಳು 'ಶೂನ್ಯ' ವರದಿಯನ್ನು ನೀಡುವಂತೆ ಈ ಮೂಲಕ ಸೂಚನೆಯನ್ನು ನೀಡಲಾಗಿದೆ.

**ಡಾ॥ ಇ.ವಿ. ರಮಣರೆಡ್ಡಿ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**P.R. 600**
**SC-500**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ನವದೆಹಲಿಯಲ್ಲಿನ ಕರ್ನಾಟಕ ಭವನದ ವಾಸ್ತವ್ಯ ದರಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 38 ಹೆಚ್‌ಎಂಬಿ 1999, ದಿನಾಂಕ : 31-05-2000.
2. ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಪತ್ರ ಸಂಖ್ಯೆ : ಆರ್.ಸಿ.ಕೆ : ಕೆ.ಬಿ.ಡಿ.ಆರ್.ಸಿ. : ಎಂ-ಅಕೌಂಟ್ಸ್ : 2004-05, ದಿನಾಂಕ : 1-6-2013 ಮತ್ತು 23-4-2014.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 41 ಹೆಚ್‌ಎಂಬಿ 2013, ದಿನಾಂಕ : 02-06-2014.
4. ಸಮ ಸಂಖ್ಯೆಯ ಪತ್ರ ದಿನಾಂಕ : 04-06-2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ "ಕರ್ನಾಟಕ ಭವನ, ನವದೆಹಲಿ (ಟಾರೀಫ್) ನಿಯಮಗಳು, 2000"ರಲ್ಲಿ ನವದೆಹಲಿಯ ಕರ್ನಾಟಕ ಭವನದಲ್ಲಿನ ವಾಸ್ತವ್ಯಕ್ಕೆ ವಿಧಿಸಬಹುದಾದ ದರಗಳು ಮತ್ತು ಷರತ್ತುಗಳನ್ನು ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ನವದೆಹಲಿಯ ಕರ್ನಾಟಕ ಭವನದ ನಿವಾಸಿ ಆಯುಕ್ತರು, ಕರ್ನಾಟಕ ಭವನದ ವಾಸ್ತವ್ಯಕ್ಕೆ ಪ್ರಸ್ತುತ ವಿಧಿಸಲಾಗುತ್ತಿರುವ ದರಗಳು ಅತ್ಯಂತ ಕಡಿಮೆಯಿರುತ್ತವೆ. ಮತ್ತು ನವದೆಹಲಿಯಲ್ಲಿನ ಹೋಟೆಲ್ ಮತ್ತು ಇತರೆ ರಾಜ್ಯಗಳ ಭವನಗಳಲ್ಲಿ ವಾಸ್ತವ್ಯಕ್ಕೆ ಅತ್ಯಂತ ಹೆಚ್ಚಿನ ದರಗಳನ್ನು ವಿಧಿಸಲಾಗುತ್ತಿದೆ. ಇದರಿಂದ ಕರ್ನಾಟಕ ಭವನದಲ್ಲಿ ವಾಸ್ತವ್ಯ ಹೂಡುವವರ ಸಂಖ್ಯೆಯಲ್ಲಿ ಹೆಚ್ಚಳವಾಗಿದೆಯೆಂದು ತಿಳಿಸಿ 2000ನೇ ಸಾಲಿನ ವಾಸ್ತವ್ಯ ದರಗಳನ್ನು ಪರಿಷ್ಕರಿಸುವಂತೆ ನಿವಾಸಿ ಆಯುಕ್ತರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ನವದೆಹಲಿಯ ಕರ್ನಾಟಕ ಭವನದ ವಾಸ್ತವ್ಯ ದರಗಳನ್ನು ಪರಿಷ್ಕರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕ್ರಮ ಸಂಖ್ಯೆ (3)ರ ಆದೇಶವನ್ನು ನಿಲಂಭನೆಯಲ್ಲಿಡಲಾಗಿತ್ತು. (kept in abeyance).

ಮೇಲ್ಕಂಡ ಪ್ರಸ್ತಾವನೆಯನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಹೆಚ್‌ಎಂಬಿ 2013, ಬೆಂಗಳೂರು, ದಿನಾಂಕ : 25-07-2014.**

ನವದೆಹಲಿಯ ಕರ್ನಾಟಕ ಭವನದಲ್ಲಿ ವಿಧಿಸುವ ವಾಸ್ತವ್ಯ ದರಗಳನ್ನು ಈ ಹಿಂದೆ ಹೊರಡಿಸಲಾದ ಆದೇಶ ಸಂಖ್ಯೆ : ಡಿಪಿಎಆರ್ 38 ಹೆಚ್‌ಎಂಬಿ 1999, ದಿನಾಂಕ : 31-05-2000 ರಲ್ಲಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಪ್ರಸ್ತುತ ಇರುವ ವಾಸ್ತವ್ಯ ದರಗಳನ್ನು ಈ ಆದೇಶದ ಜೊತೆ ಲಗತ್ತಿಸಿರುವ ಅನುಬಂಧ-1 ರಲ್ಲಿರುವಂತೆ ನಿಗದಿಗೊಳಿಸಿ ಆದೇಶಿಸಲಾಗಿದೆ.

**(ಆದೇಶವಬ್ಬಯ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 589 ವೆಚ್ಚ-12/2012ರ ಸಹಮತಿಯಂತೆ ಹೊರಡಿಸಲಾಗಿದೆ)**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮುನಿರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ರಾಜ್ಯ ಶಿಷ್ಟಾಚಾರ-1).

**ಅನುಬಂಧ-1**

| ಕ್ರ. ಸಂ. | ವರ್ಗ | ವಾಸ್ತವ್ಯ ದರಗಳು (ರೂಪಾಯಿಗಳಲ್ಲಿ) | | ಷರಾ |
|---|---|---|---|---|
| | | **Up to 7 Days** | **Beyond 7 Days and Upto 10 Days only** | |
| 01. | Chief Minister/Dy. CM/Cabinet Minister/Minister of State. | 160 | 200 | |
| 02. | Judges of High Court of Karnataka, Bangalore | 100 | 200 | |
| 03. | Speaker/Dy. Speaker/ Chairman/Dy. Chairman/Leader of Opposition/Govt. Chief Whip/Adyakshas/upa Adyakshas ZP | 160 | 200 | |
| 04. | Advovate General | 160 | 200 | |
| 05. | MLAs/MLCs of Karnataka | 100 | 200 | |
| 06. | Member of Parliament | Up to 90 days | Beyond 90 days | |
| | | 1400 (Single bed) | 2000 (Single bed) | |
| | | 2000 (Double bed) | 2400 (Double bed) | |

| ಕ್ರ. ಸಂ. | ವರ್ಗ | ವಾಸ್ತವ್ಯ ದರಗಳು (ರೂಪಾಯಿಗಳಲ್ಲಿ) | | ಷರಾ |
|---|---|---|---|---|
| | | **Up to 7 Days** | **Beyond 7 Days and Upto 10 Days only** | |
| 07. | Employees including officers on deputation/GOK Officers on deputation to GOL serving in Karnataka | Up to 7 days | Beyond 7 Days and Upto 10 Days only | |
| | a) Rs. 40,050 or more<br>b) Rs. 34,500 or more but below 40,049<br>c) Rs. 22,200 or more but below 34,499<br>d) Rs. 22, 200 or less | 100<br>80<br>60<br>20 | 200<br>160<br>120<br>40 | |
| 08. | Retired GoK Employees and their family members accompanying | 500 | 800 | |
| 09. | Ex-MLA, Ex-MLC, Ex-MPs of Karnataka and their family members. | 500 | 800 | |
| 10. | Officers and employees of Autonomous/Statutory bodies under GoK | 1000 | 1500 | |
| 11. | Others (Single Occupancy on sharing basis) (per bed per bed per day) | 1000/day | Ceiling limit Seven Days only. | |

**ಸಂಖ್ಯೆ : ಡಿಪಿಎಆರ್ 41 ಹೆಚ್‌ಎಂಬಿ 2013.**

**ಮುನಿರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ರಾಜ್ಯ ಶಿಷ್ಟಾಚಾರ-1).

**P.R. 601**

**SC-25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಉನ್ನತೀಕರಿಸಿದ ವಿಶೇಷ ಕಾರ್ಯದರ್ಶಿ ಹುದ್ದೆಗೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 360 ಸಅಸೇ 2012, ದಿನಾಂಕ : 03-06-2014.
2. ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 1996, ದಿನಾಂಕ : 01-08-1996.

**ಪ್ರಸ್ತಾವನೆ :**

ಮೇಲಿನ (1)ರಲ್ಲಿ ಓದಲಾದ ಆದೇಶದಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಅಪರ ಕಾರ್ಯದರ್ಶಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆಯನ್ನಾಗಿ (ವೇತನ ಶ್ರೇಣಿ ರೂ. 56,500-79,800) ಉನ್ನತೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ಸರ್ಕಾರದ ಸಚಿವಾಲಯದ ಉನ್ನತೀಕರಿಸಲಾದ "ಸರ್ಕಾರದ ವಿಶೇಷ ಕಾರ್ಯದರ್ಶಿ" ಹುದ್ದೆಯನ್ನು ಸಚಿವಾಲಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಸಾಕಷ್ಟು ಕಾಲವಕಾಶ ಬೇಕಾಗುವುದರಿಂದ ಈ ಹುದ್ದೆಯನ್ನು ಕಾರ್ಯಕಾರಿ ಆದೇಸದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1992 ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ, ಮೇಲಿನ (2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲು ಉದ್ದೇಶಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 360 ಸಅಸೇ 2012, ಬೆಂಗಳೂರು, ದಿನಾಂಕ : 24ನೇ ಜುಲೈ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ : 03-06-2014ರ ಆದೇಶದನ್ವಯ ಉನ್ನತೀಕರಿಸಿರುವ ಕರ್ನಾಟಕ ಸರ್ಕಾರದ ಸಚಿವಾಲಯದ ವಿಶೇಷ ಕಾರ್ಯದರ್ಶಿ, (ವೇತನ ಶ್ರೇಣಿ ರೂ. 56,550-79,800) ಹುದ್ದೆಗೆ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗದಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.

3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ವಿಭಾಗವು ದಿನಾಂಕ : 08–07–2014ರ ಟಿಪ್ಪಣಿ ಸಂಖ್ಯೆ : ಸಿಆಸುಇ 95 ಸೇನಿಡಿ 2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**PR. 602**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ನಾಗರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ಅನುಬಂಧ**

| ಹುದ್ದೆಯ ಪದನಾಮ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|
| ಸರ್ಕಾರದ ವಿಶೇಷ ಕಾರ್ಯದರ್ಶಿ (ರೂ. 56,550–79,800) | 01 | ಅಪರ ಕಾರ್ಯದರ್ಶಿ ವೃಂದದಿಂದ ಬಡ್ತಿ ಮೂಲಕ | ಅಪರ ಕಾರ್ಯದರ್ಶಿ ವೃಂದದಲ್ಲಿ ಕನಿಷ್ಠ 3 ವರ್ಷಗಳು ಸೇವೆಯನ್ನು ಸಲ್ಲಿಸಿರಬೇಕು |

**PR. 602**

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯಲ್ಲಿ ತಾತ್ಕಾಲಿಕವಾಗಿ ಸೃಜಿಸಿರುವ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 411 ಸಅಸೇ 2008, ದಿನಾಂಕ : 28–07–2009.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 559 ಸಅಸೇ 2011, ದಿನಾಂಕ : 04–03–2011.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 393 ಸಅಸೇ 2011, ದಿನಾಂಕ : 09–08–2011.
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 551 ಸಅಸೇ 2012, ದಿನಾಂಕ : 07–09–2012.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 559 ಸಅಸೇ 2013, ದಿನಾಂಕ : 10–09–2013.
6. ಜಲಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆಯ ಕಡತ ಸಂಖ್ಯೆ : ಸನೀಇ 48 ಸೇಸಎ 2014.

**ಪ್ರಸ್ತಾವನೆ :**

ಮೇಲಿನ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯಲ್ಲಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿದೆ ಮತ್ತು ಕಾಲಕಾಲಕ್ಕೆ ಮುಂದುವರಿಸಿಕೊಂಡು ಬರಲಾಗಿದೆ. ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ : 27–07–2013 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವೇತನ ಶ್ರೇಣಿ ರೂ. 28,100–50,100) | 01 |
| 2. | ಸಹಾಯಕ ಇಂಜಿನಿಯರ್ (ವೇತನ ಶ್ರೇಣಿ ರೂ. 22,800–43,200) | 03 |
| 3. | ಶೀಘ್ರಲಿಪಿಗಾರರು (ವೇತನ ಶ್ರೇಣಿ ರೂ. 16,000–29,600) | 01 |

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಕಡತದಲ್ಲಿ ದಿನಾಂಕ : 10–09–2013ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯ ಮೇಲ್ಕಂಡ ಎಲ್ಲಾ 5 ಹುದ್ದೆಗಳನ್ನು ಮತ್ತೊಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 226 ಸಅಸೇ 2014, ಬೆಂಗಳೂರು, ದಿನಾಂಕ : 25ನೇ ಜುಲೈ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿದ್ದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 27–07–2014 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವೇತನ ಶ್ರೇಣಿ ರೂ. 28,100–50,100) | 01 |
| 2. | ಸಹಾಯಕ ಇಂಜಿನಿಯರ್ (ವೇತನ ಶ್ರೇಣಿ ರೂ. 22,800–43,200) | 03 |
| 3. | ಶೀಘ್ರಲಿಪಿಗಾರರು (ವೇತನ ಶ್ರೇಣಿ ರೂ. 16,000–29,600) | 01 |

ಮೇಲ್ಕಂಡ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 411 ಸಅಸೇ 2008, ದಿನಾಂಕ : 28–07–2009ರ ಆದೇಶದಲ್ಲಿ ನಿಗದಿಪಡಿಸಲಾದ ಕ್ರಮಗಳನ್ನು ಅನುಸರಿಸಲು ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ : 10–07–1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಕ್ರಮಗಳನ್ನು ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–6).

**PR. 603**

## ತೋಟಗಾರಿಕಾ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಸಬಾ ಹೋಬಳಿ, ಯಳವರಸಿ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 14 ರಲ್ಲಿ 5.00 ಎಕರೆ ಜಮೀನನ್ನು ಸಾಗರ ಪಟ್ಟಣದಲ್ಲಿ ಪ್ರಾರಂಭಿಸಲಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ಇಡಿ/ಕೆ.ಎಸ್.ಎಚ್.ಡಿ.ಎ:ಸತೋನಿ2:27:2011–12, ದಿನಾಂಕ : 03–05–2014

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ, ಕರ್ನಾಟಕ ವಿಧಾನ ಸಭಾಧ್ಯಕ್ಷರು ಇವರು ದಿನಾಂಕ : 16–12–2013ರ ಪತ್ರದಲ್ಲಿ ಹಾಗೂ ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಾಗರ ಇವರ ದಿನಾಂಕ : 13–12–2013ರ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರ ಪಟ್ಟಣದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು, ಕಸಬಾ ಹೋಬಳಿ, ಯಳವರಸಿ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 14 ರಲ್ಲಿ 10 ಎಕರೆ ಜಮೀನನ್ನು ಹಸ್ತಾಂತರಿಸುವಂತೆ ಕೋರಿದ್ದು, ಕಂದಾಯ ಇಲಾಖೆಯವರು ಯಳವರಸಿ ತೋಟಗಾರಿಕೆ ಕ್ಷೇತ್ರದಲ್ಲಿ ಭೂ ಸರ್ವೆ ಮಾಡಿ ಕಛೇರಿ ಹಿಂಭಾಗದಲ್ಲಿ ಸಾಗರ ಪಟ್ಟಣ ಕಡೆಗೆ ಇರುವ 5.00 ಎಕರೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಪ್ರದೇಶವನ್ನು ಗುರುತಿಸಿರುತ್ತಾರೆ.

ಮುಂದುವರೆದು, ದಿನಾಂಕ : 28–04–2014ರ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 12ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಯಳವರಸಿ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 14 ರಲ್ಲಿ ಕಂದಾಯ ಇಲಾಖೆಯವರು ಕಾಲೇಜು ಕಟ್ಟಡ ನಿರ್ಮಾಣಕ್ಕೆ ಗುರುತಿಸಿದ ಜಮೀನು ಪೂರ್ಣವಾಗಿ ಅಭಿವೃದ್ಧಿಯಾಗಿರುವುದರಿಂದ ಸದರಿ ಜಮೀನಿನ ಬದಲಾಗಿ ತ್ಯಾಗರ್ತಿ ರಸ್ತೆ, ಮುಸ್ಲಿಂ ಶಾಲೆ ಹಿಂಭಾಗದಲ್ಲಿ ಸದರಿ ಕ್ಷೇತ್ರದಲಿ ಅಭಿವೃದ್ಧಿಯಾಗದೆ ಖಾಲಿಯಿರುವ ಪ್ರದೇಶದಲ್ಲಿ 5.00 ಎಕರೆ ಜಮೀನನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಾಗರ ಇವರಿಗೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಹಸ್ತಾಂತರಿಸುವಂತೆ ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು, ಕಸಬಾ ಹೋಬಳಿ, ಯಳವರಸಿ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 14ರಲ್ಲಿ ತ್ಯಾಗರ್ತಿ ರಸ್ತೆ, ಮುಸ್ಲಿಂ ಶಾಲೆ ಹಿಂಭಾಗದಲ್ಲಿ ಅಭಿವೃದ್ಧಿಯಾಗದೆ ಇರುವ 5.00 ಎಕರೆ ಜಮೀನನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಾಗರ ಇವರಿಗೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಕೆಲವು ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹಸ್ತಾಂತರಿಸಲು ಸೂಕ್ತ ಆದೇಶವನ್ನು ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 261 ತೋಇವಿ 2014, ಬೆಂಗಳೂರು, ದಿನಾಂಕ : 14–07–2014.**

ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಸಬಾ ಹೋಬಳಿ, ಯಳವರಸಿ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 14 ರಲ್ಲಿ ತ್ಯಾಗರ್ತಿ ರಸ್ತೆ, ಮುಸ್ಲಿಂ ಶಾಲೆ ಹಿಂಭಾಗದಲ್ಲಿ ಅಭಿವೃದ್ಧಿಯಾಗದೆ ಇರುವ 5.00 ಎಕರೆ ಜಮೀನನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಾಗರ ಇವರಿಗೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹಸ್ತಾಂತರಿಸಲು ಆದೇಶಿಸಲಾಗಿದೆ.

ಷರತ್ತು ಮತ್ತು ನಿಬಂಧನಗಳು :

1) ಯಳವರಸಿ ತೋಟಗಾರಿಕೆ ಕ್ಷೇತ್ರದ ಈ ಜಮೀನಿನ ಮಾಲೀಕತ್ವ ತೋಟಗಾರಿಕೆ ಇಲಾಖೆಯಡಿಯಲ್ಲೇ ಮುಂದುವರೆಯುವುದು.

2) ಸದರಿ 5.00 ಎಕರೆ ಜಮೀನನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಉಪಯೋಗಿಸುವುದು. ಇದಲ್ಲದೆ ಬೇರೆ ಇನ್ನಾವುದೇ ಚಟುವಟಿಕೆಗಳಿಗೆ ಉಪಯೋಗಿಸಬಾರದು.

3) ಸದರಿ ಕ್ಷೇತ್ರಕ್ಕೆ ಹೊಂದಿಕೊಂಡಂತಿರುವ ಜಮೀನಿನಲ್ಲಿ ಇರುವ ಸಸ್ಯ ಸಂಪತ್ತನ್ನು ಯಾವುದೇ ರೀತಿಯಲ್ಲಿ ಹಾನಿಗೊಳಿಸಬಾರದು.

4) ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಹಸ್ತಾಂತರಿಸಲು ಗುರುತಿಸಿರುವ 5.00 ಎಕರೆ ಭೂಮಿಯನ್ನು ನಕ್ಷೆಯಲ್ಲಿ ಗುರುತಿಸಿ ಸದರಿ ನಕ್ಷೆಗೆ ನಿರ್ದೇಶನಾಲಯದಿಂದ ಅನುಮೋದನೆ ಪಡೆದು ನಂತರ ಹಸ್ತಾಂತರಿಸುವುದು.

**PR. 604**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

## ತೋಟಗಾರಿಕಾ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ಊರುಗಡೂರು ಗ್ರಾಮದಲ್ಲಿ ಮಾದರಿ ಪುಷ್ಪಾಭಿವೃದ್ಧಿ ಕೇಂದ್ರ ಹಾಗೂ ತುಂಗಾ ತೋಟಗಾರಿಕೆ ಕ್ಷೇತ್ರದಲ್ಲಿ ಇಲಾಖಾ ಜಾಗವನ್ನು ರಸ್ತೆ, ನಿರ್ಮಾಣ ಕಾಮಗಾರಿಗಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ನಅಇ 159 ಬೆಂರೂಪ್ರಾ 2012, ದಿನಾಂಕ : 28-07-2012.
2. ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ, ಇವರ ಪತ್ರ ಸಂ. ಶಿನಪಾ/ಯೋ/ಸಿಆರ್-825/2013-14, ದಿನಾಂಕ : 07-08-2013.
3. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ಇಡಿ/ಕೆಎಸ್‌ಎಚ್‌ಡಿಎ/ಎಡಿಎಚ್2/4/2013-14, ದಿನಾಂಕ: 11-11-2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ, ಶಿವಮೊಗ್ಗ-ಭದ್ರಾವತಿ ನಗರಗಳ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ-2031 (ಪರಿಷ್ಕೃತ-II)ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 2ರ ಪತ್ರದಲ್ಲಿ, ಶಿವಮೊಗ್ಗ ತಾಲ್ಲೂಕು ನಿಧಿಗೆ ಹೋಬಳಿ ಊರುಗಡೂರು ಗ್ರಾಮದ ಸರ್ವೆ ನಂ. 19/1, 20, 21, 22, 23, ಹಾಗೂ 42ರಲ್ಲಿ ತೋಟಗಾರಿಕೆ ಇಲಾಖೆಯಲ್ಲಿನ ಜಮೀನಿನಲ್ಲಿ ಹಾದು ಹೋಗಿರುವ ಹಾಲಿ ಉತ್ತರ ದಿಕ್ಕಿನ ರಸ್ತೆಯನ್ನು ಮಹಾ ಯೋಜನೆ (ಪ-II)-2013ರಲ್ಲಿ 18.00 ಮೀ. ಅಗಲಕ್ಕೆ ಪ್ರಸ್ತಾಪಿಸಲಾಗಿದೆ ಎಂದು ಆಯುಕ್ತರು, ಶಿವಮೊಗ್ಗ ನಗರಾವೃದ್ಧಿ ಪ್ರಾಧಿಕಾರ, ಶಿವಮೊಗ್ಗ, ಇವರು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : 3ರ ಪತ್ರದಲ್ಲಿ, ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ ಊರುಗಡೂರು ಗ್ರಾಮದ ಮಾದರಿ ಪುಷ್ಪಾಭಿವೃದ್ಧಿ ಕೇಂದ್ರದ ಸರ್ವೆ ನಂ. 19/1, 20, 21, 22, 23, ಹಾಗೂ 42 ಮತ್ತು ನಿಧಿಗೆ ಹೋಬಳಿಯ ತುಂಗಾ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 3 ರಲ್ಲಿ ಸರ್ಕಾರದ ಆದೇಶ ಸಂಖ್ಯೆ : ನಅಇ:159:ಬೆಂರೂಪ್ರಾ:2012, ಬೆಂಗಳೂರು, ದಿನಾಂಕ : 28-07-2012ರ ಆದೇಶ ಹಾಗೂ ಶಿವಮೊಗ್ಗ ನಗರ ಪ್ರಾಧಿಕಾರ (SUDA) ರವರಿಂದ ರಸ್ತೆ ನಿರ್ಮಾಣ ಕಾಮಗಾರಿಗಾಗಿ ಅನುಮೋದನೆಯಾಗಿರುವ ನಕ್ಷೆಯ ಪ್ರಕಾರ ರಸ್ತೆಯ ಮಧ್ಯೆ ಭಾಗದಿಂದ 18 ಮೀಟರ್ ಹಾಗೂ 9 ಮೀಟರ್ ಪುಷ್ಪಾಭಿವೃದ್ಧಿ ಕೇಂದ್ರದ ಸ್ಥಾಪನೆ ಜಾಗಕ್ಕೆ ಹಾಗೂ ರಸ್ತೆಯ ಮಧ್ಯ ಭಾಗದಿಂದ 7.5 ಮೀಟರ್ ಜಾಗ ಬಿಟ್ಟು ತುಂಗಾ ತೋಟಗಾರಿಕೆ ಕ್ಷೇತ್ರದ ಕಾಂಪೌಂಡ್ ಗೋಡೆ ನಿರ್ಮಿಸಬೇಕಾಗಿದ್ದು, ಈ ಹಿನ್ನೆಲೆಯಲ್ಲಿ, ಪುಷ್ಪಾಭಿವೃದ್ಧಿ ಕೇಂದ್ರ ಸ್ಥಾಪನೆಯ ಜಾಗದಲ್ಲಿ ಒಟ್ಟು 4161 ಚ.ಮೀ. ಹಾಗೂ ತುಂಗಾ ತೋಟಗಾರಿಕೆ ಕ್ಷೇತ್ರದಲ್ಲಿ 924 ಚ.ಮೀ. ಜಾಗವನ್ನು ರಸ್ತೆ ನಿರ್ಮಾಣ ಕಾಮಗಾರಿಗಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಬಿಟ್ಟುಕೊಡಬೇಕಾಗಿದ್ದು, ಶಿವಮೊಗ್ಗ ನಗರಾವೃದ್ಧಿ ಪ್ರಾಧಿಕಾರವರಿಂದ ರಸ್ತೆಗಳ ನಿರ್ಮಾಣಕ್ಕಾಗಿ ಅನುಮೋದನೆಯಾಗಿರುವ ಮಾದರಿ ನಕ್ಷೆಯಲ್ಲಿ ಗುರುತಿಸಿರುವಂತೆ ನಿಗದಿತ ಸ್ಥಳವನ್ನು ರಸ್ತೆ ಕಾಮಗಾರಿಗಾಗಿ ಮಾದರಿ ನಕ್ಷೆಯಲ್ಲಿ ಗುರುತಿಸಿರುವಂತೆ ನಿಗದಿತ ಸ್ಥಳವನ್ನು ರಸ್ತೆ ಕಾಮಗಾರಿಗಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ವಿಷಯವನ್ನು ದಿನಾಂಕ : 04-09-2013ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 11ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಮಂಡಿಸಲಾಗಿದ್ದು, ಕೂಲಂಕಷ ಚರ್ಚೆಯ ನಂತರ ಇತ್ತೀಚೆಗೆ ಜಿಲ್ಲಾಧಿಕಾರಿ, ಶಿವಮೊಗ್ಗ ರವರ ಮಾದರಿ ಪುಷ್ಪಾಭಿವೃದ್ಧಿ ಕೇಂದ್ರದ ಸ್ಥಾಪನೆಗಾಗಿ 8.24 ಎಕರೆ ಭೂಮಿಯನ್ನು ತೋಟಗಾರಿಕೆ ಇಲಾಖೆಗೆ ನೀಡಿರುವುದರಿಂದ ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ ಊರುಗಡೂರು ಗ್ರಾಮದ ಮಾದರಿ ಪುಷ್ಪಾಭಿವೃದ್ಧಿ ಕೇಂದ್ರದ ಸರ್ವೆ ನಂ. 19/1, 20, 21, 22, 23 ಹಾಗೂ 42 ರಲ್ಲಿ 4161 ಚ.ಮೀ. ಹಾಘೂ ತುಂಗಾ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 3 ರಲ್ಲಿ 924 ಚ.ಮೀ. ಇಲಾಖಾ ಜಾಗವನ್ನು ರಸ್ತೆ ವಿಸ್ತರಣೆಗಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಅನುಮತಿ ನೀಡಿರುತ್ತದೆ.

ಮುಂದುವರೆದು ಈ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ ಊರುಗಡೂರು ಗ್ರಾಮದಲ್ಲಿ ಮಾದರಿ ಪುಷ್ಪಾಭಿವೃದ್ಧಿ ಕೇಂದ್ರದ ಸರ್ವೆ ನಂ. 19/1, 20, 21, 22, 23 ಹಾಗೂ 42 ರಲ್ಲಿ 4161 ಚ.ಮೀ. ಹಾಗೂ ತುಂಗಾ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 3 ರಲ್ಲಿ 924 ಚ.ಮೀ. ಇಲಾಖಾ ಜಾಗವನ್ನು ರಸ್ತೆ ವಿಸ್ತರಣಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಸರ್ಕಾರದಿಂದ ಸೂಕ್ತ ಆದೇಶವನ್ನು ಹೊರಡಿಸಬೇಕೆಂದು ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 325 ತೋಇವಿ 2013, ಬೆಂಗಳೂರು, ದಿನಾಂಕ : 07-04-2014.**

ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ಊರುಗಡೂರು ಗ್ರಾಮದಲ್ಲಿರುವ ಮಾದರಿ ಪುಷ್ಪಾಭಿವೃದ್ಧಿ ಕೇಂದ್ರದ ಸರ್ವೆ ನಂ. 19/1, 20, 21, 22, 23 ಮತ್ತು 42 ರಲ್ಲಿ 4161 ಚ.ಮೀ. ಹಾಗೂ ತುಂಗಾ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 3 ರಲ್ಲಿ 9244 ಚ.ಮೀ. ಇಲಾಖಾ ಜಾಗದ ಮೌಲ್ಯವನ್ನು ಪಡೆದು ರಸ್ತೆ ವಿಸ್ತರಣೆಗಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಲು ಆದೇಶಿಸಲಾಗಿದೆ.

PR. 605 ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

SC-20 ಬಿ.ವಿ. ರಾಮಲಿಂಗಯ್ಯ

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

## ತೋಟಗಾರಿಕಾ ಸಚಿವಾಲಯ

**ವಿಷಯ :** ತರಕಾರಿ ಉತ್ಕೃಷ್ಟ ಕೇಂದ್ರವನ್ನು (Centre of Excellence on vegetables) ಪ್ರಾರಂಭಿಸಲು ಬಾಗಲಕೋಟೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ 20 ಎಕರೆ ಜಮೀನನ್ನು ತೋಟಗಾರಿಕೆ ಇಲಾಖೆ (ಜಿಪಂ) ಧಾರವಾಡಕ್ಕೆ ಪೂರ್ಣ ಒಡೆತನದೊಂದಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬಾಗಲಕೋಟೆ ಇವರ ಪತ್ರ ಸಂಖ್ಯೆ : ಆರ್/ಯುಎಚ್ಎಸ್‌ಬಿ/15/2014-12/917, ದಿನಾಂಕ : 13-05-2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ, ತೋಟಗಾರಿಕೆ ಇಲಾಖೆ (ಜಿಪಂ) ಧಾರವಾಡ ಇವರು ಇಂಡೋ-ಇಸ್ರೇಲ್ ಸಹಯೋಗದೊಂದಿಗೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಸಂಶೋಧನಾ ಕೇಂದ್ರ, ಕುಂಬಾಪುರ, ಧಾರವಾಡ ಆವರಣದಲ್ಲಿ ತರಕಾರಿ ಸಂಶೋಧನೆ ಬಗ್ಗೆ ಉತ್ಕೃಷ್ಟ ಕೇಂದ್ರವನ್ನು (Centre of Excellence on vegetables) ಸ್ಥಾಪಿಸಿಲಿದ್ದು, ಸದರಿ ಕೇಂದ್ರಕ್ಕೆ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಸಂಶೋಧನಾ ಕೇಂದ್ರ, ಕುಂಬಾಪುರ, ಧಾರವಾಡ ಆವರಣದಲ್ಲಿ ಹೆಚ್ಚುವರಿಯಾಗಿರುವ 20 ಎಕರೆ ಜಮೀನನ್ನು ಪೂರ್ಣ ಒಡೆತನದೊಂದಿಗೆ ತೋಟಗಾರಿಕೆ ಇಲಾಖೆ (ಜಿಪಂ) ಧಾರವಾಡ ಇವರಿಗೆ ವರ್ಗಾಯಿಸಲು ದಿನಾಂಕ : 19-04-2014ರಂದು ನಡೆದ 22ನೇ ವ್ಯವಸ್ಥಾಪನಾ ಮಂಡಳಿಯಲ್ಲಿ ತೀರ್ಮಾನಿಸಲಾಗಿದೆ. ಇದರನ್ವಯ ಈ 20 ಎಕರೆಯನ್ನು ಪೂರ್ಣ ಒಡೆತನದೊಂದಿಗೆ ತೋಟಗಾರಿಕೆ ಇಲಾಖೆ (ಜಿಪಂ) ಧಾರವಾಡಕ್ಕೆ ವರ್ಗಾಯಿಸಲು ಸರ್ಕಾರದ ಅನುಮೋದನೆಯನ್ನು ನೀಡುವಂತೆ ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬಾಗಲಕೋಟೆ, ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 275 ತೋಇವಿ 2014, ಬೆಂಗಳೂರು, ದಿನಾಂಕ : 31-07-2014.**

ಬಾಗಲಕೋಟೆ ತೋಟಗಾರಿಕೆ ವಿಜ್ಞಾನಿಗಳ ವಿಶ್ವವಿದ್ಯಾಲಯದ ಸಂಶೋಧನಾ ಕೇಂದ್ರ, ಕುಂಬಾಪುರ, ಧಾರವಾಡ ಆವರಣದಲ್ಲಿ ಹೆಚ್ಚುವರಿಯಾಗಿರುವ 20 ಎಕರೆ ಜಮೀನನ್ನು ಪೂರ್ಣ ಒಡೆತನದೊಂದಿಗೆ ತೋಟಗಾರಿಕೆ ಇಲಾಖೆ (ಜಿಪಂ) ಧಾರವಾಡ ಇವರಿಗೆ ವರ್ಗಾಯಿಸಿ ಆದೇಶಿಸಿದೆ.

PR. 606 ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

SC-25 ಬಿ.ವಿ. ರಾಮಲಿಂಗಯ್ಯ

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ 10-10-2008.

2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ 17-01-2014.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 10-10-2008 ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 110 ಮುಸರ 2013, ಬೆಂಗಳೂರು, ದಿನಾಂಕ: 03ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1 | ಶ್ರೀ ಚಂದ್ರಶೇಖರ್ ಬಿನ್ ವೆಂಕಪ್ಪ ಪೂಜಾರಿ, ಕೋರ್ಯಮನೆ, ಬಾಳ್ತಿಲ ಗ್ರಾಮ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಅಧ್ಯಕ್ಷರು |
| 2 | ಶ್ರೀ ಯೂಸುಫ್ ಕರಂದಾಡಿ ಬಿನ್ ಮೊಹಮ್ಮದ್ ಕರಂದಾಡಿ ಮನೆ ಸಜೀಪಮುನ್ನೂರು ಗ್ರಾಮ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ (ಸಾಮಾನ್ಯ) | ಸದಸ್ಯರು |
| 3 | ಶ್ರೀಮತಿ ಅಸುಂತ ಮರಿಯ ಕೋಂ ಕ್ಲೀಫರ್ಡ್ ಡಿಸೋಜ, ಮೇನಾಡು, ಕಾವಳಪಡೂರು ಗ್ರಾಮ, ದಕ್ಷಿಣ ಕನ್ನಡ ಜಿಲ್ಲೆ (ಮಹಿಳೆ) | ಸದಸ್ಯರು |
| 4 | ಶ್ರೀ ಸದಾನಂದ ಬಿನ್ ಕುಂಡ, ಅಂಬೇಡ್ಕರ್ ಕಾಲೋನಿ, ಬಂಟ್ವಾಳ ತಾಲ್ಲೂಕು, ನಾವೂರು, ದಕ್ಷಿಣ ಕನ್ನಡ ಜಿಲ್ಲೆ (ಪರಿಶಿಷ್ಟ ಜಾತಿ) | ಸದಸ್ಯರು |
| 5 | ಶ್ರೀ ವಿಶ್ವನಾಥ ನಾಯ್ಕ ಬಿನ್ ಗೋವಿಂದನಾಯ್ಕ, ನಿರ್ಬೈಲ್ ಮನೆ, ಮಂಚಿ ಗ್ರಾಮ, ದಕ್ಷಿಣ ಕನ್ನಡ ಜಿಲ್ಲೆ (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

**PR. 682**
**SC. 25**

## ಕಂದಾಯ ಸಚಿವಾಲಯ

**ವಿಷಯ:** ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ 10-10-2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ 17-01-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 90 ಮುಸರ 2013, ಬೆಂಗಳೂರು, ದಿನಾಂಕ: 07ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1 | ಶ್ರೀ ಬಿ.ಎಂ. ನಾರಾಯಣಸ್ವಾಮಿ ಬಿನ್ ಮುನಿವೆಂಕಟರಾಯಪ್ಪ, ದೊಡ್ಡಬೊಮ್ಮನ ಹಳ್ಳಿ, ಚಿಂತಾಮಣಿ ತಾಲ್ಲೂಕು (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಶಾಂತಮ್ಮ ಬಿನ್ ಲೇಟ್ ಮುದ್ದಪ್ಪ, ಮುರಗಮಲ್ಲ, ಚಿಂತಾಮಣಿ ತಾಲ್ಲೂಕು (ಮಹಿಳೆ) | ಸದಸ್ಯರು |
| 3 | ಶ್ರೀ ನರಸಿಂಹಯ್ಯ ಬಿನ್ ನರಸಿಂಹಪ್ಪ, ನಾಯಿಂದ್ರಹಳ್ಳಿ, ಚಿಂತಾಮಣಿ ತಾಲ್ಲೂಕು (ಪರಿಶಿಷ್ಟ ಜಾತಿ) | ಸದಸ್ಯರು |
| 4 | ಶ್ರೀ ಗಂಗಪ್ಪ ಬಿನ್ ಮರಿಯಪ್ಪ, ಗೌಡನಹಳ್ಳಿ, ಚಿಂತಾಮಣಿ ತಾಲ್ಲೂಕು (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

PR. 683
SC. 25

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ 10-10-2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ 17-01-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 35 ಮುಸರ 2013, ಬೆಂಗಳೂರು, ದಿನಾಂಕ: 07ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಎನ್. ಕೆಂಪೇಗೌಡ ಬಿನ್ ನರಸಿಂಹಯ್ಯ, ಕೊಮ್ಮಸಂದ್ರ ವಿಜಯಪುರ ಅಂಚೆ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಪ್ರಭಾವತಿ ಕೋಂ ಶ್ರೀನಿವಾಸ್ ಕಾರಹಳ್ಳಿ, ದೇವನಹಳ್ಳಿ ತಾಲ್ಲೂಕು (ಮಹಿಳೆ) | ಸದಸ್ಯರು |
| 3 | ಶ್ರೀ ಮುನಿಜೋಗಪ್ಪ, ಪುರ, ವಿಜಯಪುರ ಅಂಚೆ, ದೇವನಹಳ್ಳಿ ತಾಲ್ಲೂಕು (ಪರಿಶಿಷ್ಟ ಜಾತಿ) | ಸದಸ್ಯರು |
| 4 | ಶ್ರೀ ಮುನಿಯಪ್ಪ, ಚಿಕ್ಕಸಣ್ಣೆ ಗ್ರಾಮ, ದೊಡ್ಡಸಣ್ಣೆ ಅಂಚೆ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

PR. 684
SC. 25

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ 10-10-2008.

2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ 17-01-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 24 ಮುಸರ 2013, ಬೆಂಗಳೂರು, ದಿನಾಂಕ: 07ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1 | ಶ್ರೀ ಡಿ.ಎಸ್. ಅನಂತಮೂರ್ತಿ ಬಿನ್ ಆರ್. ನರಸಿಂಹಯ್ಯ, ನಂ.60/3, 4ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560018 (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಕಮಲ ಕೋಂ ಕೆಂಡಯ್ಯ, ನಂ.6/1, ವಿಠಲ್‌ನಗರ, ಮುನ್ನೇಶ್ವರ ದೇವಸ್ಥಾನ, ಚಾಮರಾಜಪೇಟೆ, ಬೆಂಗಳೂರು-560018 (ಮಹಿಳೆ) | ಸದಸ್ಯರು |
| 3 | ಶ್ರೀ ಎನ್. ಲಕ್ಷ್ಮೀನಾರಾಯಣ ಬಿನ್ ಐ.ಪಿ.ಡಿ. ಸಾಲಪ್ಪ, ನಂ.93, 1ನೇ ಮುಖ್ಯ ರಸ್ತೆ, 7ನೇ ಅಡ್ಡ ರಸ್ತೆ, ಜಗಜೀವನರಾಂ ನಗರ, ಬೆಂಗಳೂರು-560018 (ಪರಿಶಿಷ್ಟ ಜಾತಿ) | ಸದಸ್ಯರು |
| 4 | ಶ್ರೀ ರಾಜು ಬಿನ್ ಆರ್. ಸಿದ್ದಯ್ಯ, 4ನೇ ಕ್ರಾಸ್, ಅಜಾದ್‌ನಗರ, ಚಾಮರಾಜಪೇಟೆ, ಬೆಂಗಳೂರು (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

PR. 685
SC. 25

## ಕಂದಾಯ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆ, ನಾಗಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ 10-10-2008.

2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ 17-01-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

ಅದರಂತೆ ಮಂಡ್ಯ ಜಿಲ್ಲೆ, ನಾಗಮಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 172 ಮುಸರ 2013, ಬೆಂಗಳೂರು, ದಿನಾಂಕ: 03ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಡ್ಯ ಜಿಲ್ಲೆ, ನಾಗಮಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1 | ಶ್ರೀ ರಮೇಶ್ ಬಿನ್ ಸಿದ್ದಲಿಂಗೇಗೌಡ ಚಿಣ್ಯ, ಹೊಣಕೆರೆ ಹೋಬಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಎಂ.ಜಿ. ಸರೋಜ ಕೋಂ ಎಸ್.ಎನ್. ಬಾಬು, ಬೊಮ್ಮನಾಯಕನಹಳ್ಳಿ, ಹೊಣಕೆರೆ ಹೋಬಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ (ಮಹಿಳೆ) | ಸದಸ್ಯರು |
| 3 | ಶ್ರೀ ಆರ್.ಸಿ. ನರಸಿಂಹಸ್ವಾಮಿ ಬಿನ್ ಲೇ. ಸಿದ್ದಯ್ಯ, ರಾಮಚಂದ್ರ ಅಂಗ್ರಹಾರ, ದೊಡ್ಡಬಲ ಗ್ರಾಮ ಪಂಚಾಯತ್, ಬಿಂಡಿಗನವಿಲೆ ಹೋಬಳಿ, ನಾಗಮಂಗಲ ತಾಲ್ಲೂಕು (ಪರಿಶಿಷ್ಟ ಜಾತಿ) | ಸದಸ್ಯರು |
| 4 | ಶ್ರೀ ಬಾಲರಾಜು ಬಿನ್ ಹೈಕೋರ್ಟ್‌ಸಿಂಗ್, ಶಿಕಾರಿಪುರ, ಕಸಬಾ ಹೋಬಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

PR. 686
SC. 25

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಮಾನವ ಸಂಪನ್ಮೂಲ ನಿರ್ವಹಣಾ ಯೋಜನೆಯನ್ನು (ಹೆಚ್.ಆರ್.ಎಂ.ಎಸ್), ಹೆಚ್.ಆರ್.ಎಂ.ಎಸ್ 2.0 ಆವೃತ್ತಿಗೆ ಉನ್ನತೀಕರಿಸಲು ಮಂಜೂರಾತಿ.

**ಓದಲಾಗಿದೆ :**
1) ದಿನಾಂಕ:30.03.2005ರ ಸರ್ಕಾರಿ ಆದೇಶ ಸಂಖ್ಯೆ: ಆಇ 8 ಜಿಐಇ 2003.
2) ದಿನಾಂಕ:07.07.2006ರ ಸರ್ಕಾರಿ ಆದೇಶ ಸಂಖ್ಯೆ: ಆಇ 37 ಪಿಎಂಯು 2006.
3) ದಿನಾಂಕ:14.11.2006ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 25 ಇಜಿವಿ 2006(ಭಾ-2).
4) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ-ಆಡಳಿತ ಕೇಂದ್ರ, ಇವರ ದಿನಾಂಕ 04.02.2014ರ ಅಧಿಸೂಚನೆ ಸಂಖ್ಯೆ: ಸಿ.ಇ.ಜಿ/ 29 /ಹೆಚ್.ಆರ್.ಎಂ.ಎಸ್/ 2012.
5) ದಿನಾಂಕ 05.02.2014ರ ಅಧಿಸೂಚನೆ ಸಂಖ್ಯೆ: ಸಿ.ಇ.ಜಿ/29/ ಹೆಚ್.ಆರ್.ಎಂ.ಎಸ್/ 2012 ರನ್ವಯ ರಚಿಸಲ್ಪಟ್ಟ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:-**

1. ಮೇಲೆ (1)ರಲ್ಲಿ ಓದಲಾದ ದಿನಾಂಕ:30.03.2005ರ ಸರ್ಕಾರಿ ಆದೇಶದನ್ವಯ ಗಣಕೀಕೃತ ಮಾನವ ಸಂಪನ್ಮೂಲ ಯೋಜನೆಯನ್ನು (ಇನ್ನು ಮುಂದೆ ಹೆಚ್.ಆರ್.ಎಂ.ಎಸ್ ಎಂದು ಕರೆಯಲಾಗುವುದು) ಅಭಿವೃದ್ಧಿಗೊಳಿಸುವ ಸಮಾಲೋಚನಾ ಒಪ್ಪಂದವನ್ನು ಮೆ॥ ಸಿ.ಎಂ.ಸಿ ಲಿಮಿಟೆಡ್ ರವರಿಗೆ ವಹಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ:07.07.2006 ರ ಆದೇಶದನ್ವಯ ಹೆಚ್.ಆರ್.ಎಂ.ಎಸ್ ಯೋಜನೆಯನ್ನು ಆರ್ಥಿಕ ಇಲಾಖೆಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)ಗೆ ವರ್ಗಾಯಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ, ನಂತರದ, ದಿನಾಂಕ:14.11.2006ರ ಸರ್ಕಾರಿ ಆದೇಶದನ್ವಯ ಇ-ಆಡಳಿತ ಕೇಂದ್ರವನ್ನು ಹೆಚ್.ಆರ್.ಎಂ.ಎಸ್ ಯೋಜನೆಯನ್ನು ಜಾರಿಗೊಳಿಸುವ ಏಜೆನ್ಸಿಯನ್ನಾಗಿ ಪದನಾಮಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.
2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ-ಆಡಳಿತ)ಯಿಂದ ಅಭಿವೃದ್ಧಿಗೊಳಿಸಿರುವ ಮತ್ತು ನಿರ್ವಹಿಸುತ್ತಿರುವ ಮಾನವ ಸಂಪನ್ಮೂಲ ನಿರ್ವಹಣಾ ಯೋಜನೆಯು ಪ್ರಸ್ತುತ ರಾಜ್ಯದ ಎಲ್ಲಾ 5.5 ಲಕ್ಷ ಸರ್ಕಾರಿ ನೌಕರರ ಮತ್ತು ಅನುದಾನಿತ ವಿದ್ಯಾ ಸಂಸ್ಥೆಗಳು ಮತ್ತು ಕೆಲವು ಮಂಡಳಿ ಹಾಗೂ ನಿಗಮಗಳಲ್ಲಿನ ಸುಮಾರು 1 ಲಕ್ಷ ನೌಕರರ ವೇತನ ಬಿಲ್ಲು ತಯಾರಿಸುವ ಸೇವೆ ಮತ್ತು ಅವರುಗಳ ಸೇವಾ ವಿವರಗಳ ನಿರ್ವಹಣೆಗೆ ಸಂಬಂಧಿಸಿದ ಸೇವೆಯನ್ನು ಒದಗಿಸುತ್ತಿದೆ. ಹೆಚ್ಚುವರಿ ಕಾರ್ಯಚಟುವಟಿಕೆಗಳು ಮತ್ತು ಅತ್ಯಗತ್ಯ ತಾಂತ್ರಿಕತೆ ಉನ್ನತೀಕರಣದ

ಅವಶ್ಯಕತೆ ಇರುವುದನ್ನು ಪರಿಗಣಿಸಿ, ಪ್ರಸ್ತುತ ಹೆಚ್.ಆರ್.ಎಂ.ಎಸ್ ಸೌಲಭ್ಯವನ್ನು ಹೆಚ್ಚುವರಿ ಅನುಕೂಲತೆಗಳು ಮತ್ತು ಇತ್ತೀಚಿನ ತಾಂತ್ರಿಕತೆ ಅನುಗುಣವಾಗಿ ಹೆಚ್.ಆರ್.ಎಂ.ಎಸ್ 2.0 ಆವೃತ್ತಿಗೆ ಉನ್ನತೀಕರಿಸುವ ಅಗತ್ಯತೆಯನ್ನು ಸರ್ಕಾರವು ಪರಿಗಣಿಸಿದೆ.

3. **ಹಿನ್ನೆಲೆ**: ಮಾನವ ಸಂಪನ್ಮೂಲ ದತ್ತಾಂಶವನ್ನು ಸೃಜಿಸುವುದು ಮತ್ತು ನೌಕರರ ಸಂಬಂಧಿತ ವೆಚ್ಚಗಳ ಅಂಕಿಅಂಶಗಳನ್ನು ತಯಾರಿಸುವಲ್ಲಿ ಸಹಕಾರಿಯಾಗುವುದು ಮತ್ತು ದಿನನಿತ್ಯ ತೀರ್ಮಾನ ಹಾಗೂ ಮುಂದಿನ ಯೋಜನೆಗಳನ್ನು ಕೈಗೊಳ್ಳುವುದಕ್ಕೆ ವೃಂದ ನಿರ್ವಹಣೆ ಮಾಹಿತಿಯನ್ನು ಒದಗಿಸುವ ಉದ್ದೇಶಕ್ಕಾಗಿ ಹೆಚ್.ಆರ್.ಎಂ.ಎಸ್ ಯೋಜನೆಯನ್ನು 2007 ನೇ ಸಾಲಿನಲ್ಲಿ ಜಾರಿಗೊಳಿಸಲಾಯಿತು. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999 (ಇನ್ನು ಮುಂದೆ ಕೆಟಿಪಿಪಿ ಅಧಿನಿಯಮವೆಂದು ಕರೆಯಲಾಗುವುದು) ಅಡಿಯಲ್ಲಿ ಮೆ॥ ಸಿ.ಎಂ.ಸಿ ಲಿಮಿಟೆಡ್ ಇವರ ಸೇವೆಯನ್ನು ಪಡೆದು, ಈ ವಿದ್ಯುನ್ಮಾನ ವೇದಿಕೆಯನ್ನು ಅಭಿವೃದ್ಧಿಗೊಳಿಸಿ ನಿರ್ವಹಿಸಲಾಗುತ್ತಿದೆ.

4. ಎಲ್ಲಾ ನೌಕರರ ವಿವಿಧ ವೇತನ ಮತ್ತು ಭತ್ಯೆಗಳಿಗೆ ಸಂಬಂಧಿಸಿದಂತೆ ಪೂರ್ಣ ಟ್ರ್ಯಾಕಿಂಗ್ ಸಾಮರ್ಥ್ಯತೆಯನ್ನು ಹೆಚ್.ಆರ್.ಎಂ.ಎಸ್ ಹೊಂದಿದ್ದು, ವೇತನ ಮತ್ತು ಭತ್ಯೆಗಳ ಸಂಬಂಧಿತ ಸರ್ಕಾರದ ವೆಚ್ಚಗಳ ಮಾಹಿತಿಯನ್ನು ಒದಗಿಸುವ ಕೇಂದ್ರೀಕೃತ ವ್ಯವಸ್ಥೆಯಾಗಿದೆ. ರಾಜ್ಯದ ಎಲ್ಲಾ ನೌಕರರಿಗೆ ಸಂಬಂಧಿಸಿದ ಮಾನವ ಸಂಪನ್ಮೂಲ ಮಾಹಿತಿ ಹಾಗೂ ಕ್ರೋಢೀಕೃತ ಸೇವಾ ಮಾಹಿತಿಯನ್ನು ಸೃಜಿಸುವಲ್ಲಿ ಹೆಚ್.ಆರ್.ಎಂ.ಎಸ್ ಕೇಂದ್ರೀಕೃತ ವೇದಿಕೆಯಾಗಿದೆ. ವರ್ಗಾವಣೆಗಳು/ ನೇಮಕಾತಿ–ಭರ್ತಿ ಕ್ರಮ ಮತ್ತು ಮುಂದಿನ ಯೋಜನೆಗಳನ್ನು ಕೈಗೊಳ್ಳುವ ಸಲುವಾಗಿ ವೃಂದ ನಿರ್ವಹಣೆ ಮಾಹಿತಿಯನ್ನು ಹೆಚ್.ಆರ್.ಎಂ.ಎಸ್ ಒದಗಿಸುತ್ತಿದೆ.

5. ಸರ್ಕಾರಕ್ಕೆ ಹಾಗೂ ನೌಕರರಿಗೆ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸುವ ಬಗ್ಗೆ ಸಾಧ್ಯವಾಗಲು, ಈಗ ಚಾಲ್ತಿಯಲ್ಲಿರುವ ಹೆಚ್.ಆರ್.ಎಂ.ಎಸ್ ಆವೃತ್ತಿಯ ತಾಂತ್ರಿಕತೆಯನ್ನು ಮತ್ತು ಕಾರ್ಯಕ್ಷಮತೆಯನ್ನು ಉನ್ನತೀಕರಿಸುವುದು ಅಗತ್ಯವಾಗಿದೆ. ಹೆಚ್.ಆರ್.ಎಂ.ಎಸ್ ಉನ್ನತೀಕರಣಕ್ಕೆ ಇರುವ ಮೂಲ ಕಾರಣಗಳು ಈ ಕೆಳಗಿನಂತಿವೆ:–

(i) ಕಾರ್ಯನಿರ್ವಹಿಸುತ್ತಿರುವ ನೌಕರರ ಸಂಖ್ಯೆಯ ಆಧಾರದ ಮೇಲೆ ಪ್ರಸ್ತುತ ಹೆಚ್.ಆರ್.ಎಂ.ಎಸ್ ಯೋಜನೆಯು, ಆಯವ್ಯಯ ಅಂದಾಜುಗಳನ್ನು ತಯಾರಿಸಲಾಗುತ್ತಿದ್ದು, ವೃಂದ – ಹುದ್ದೆ ಸಂಖ್ಯೆಯ ಆಧಾರದ ಮೇಲೆ ನೌಕರರ ಸಂಬಳಕ್ಕಾಗಿ ಆಯವ್ಯಯ ಅಂದಾಜುಗಳನ್ನು ತಯಾರಿಸುವ ಸಾಮರ್ಥ್ಯವನ್ನು ಹೊಂದಿಲ್ಲದಿರುವುದು.

(ii) ವರ್ಕ್‌ಫ್ಲೋ ಕಾರ್ಯವಿಧಾನ ಕೊರತೆಯಿಂದಾಗಿ, ಪ್ರಸ್ತುತ ಯೋಜನೆಯಲ್ಲಿ ನೌಕರರ ಸೇವಾ ಮಾಹಿತಿಯನ್ನು ಘಟನೆಯ ನಂತರ ದಾಖಲಿಸುವ ವ್ಯವಸ್ಥೆ ಇರುವುದರಿಂದ ನೈಜ ಸಮಯದಲ್ಲಿ (real time) ನೌಕರರ ಸೇವಾ ಮಾಹಿತಿ ಲಭ್ಯವಾಗುತ್ತಿಲ್ಲ.

(iii) ಬಾಹ್ಯ ಮಾಹಿತಿ ತಂತ್ರಜ್ಞಾನ ಸಿಸ್ಟಂಗಳಾದ ಖಜಾನೆ, ಮಹಾಲೇಖಪಾಲರು ಇತ್ಯಾದಿಗಳೊಂದಿಗೆ ಇಂಟರ್ ಪೇಸ್ ಅನುಕೂಲತೆಗಳು ಲಭ್ಯವಿಲ್ಲದಿರುವುದು.

(iv) ಅರ್ಜಿ ಸಲ್ಲಿಸಲು ನಮೂನೆ, ರಜೆ ಮಂಜೂರಾತಿ, ಮುಂಗಡಗಳು, ಪಿಂಚಣಿ ಮತ್ತು ಅವರ ಮೂಲ ವಿವರಗಳನ್ನು ಇಂದೀಕರಿಸುವುದು ಇತ್ಯಾದಿ ಸೇವೆಗಳು ಸರ್ಕಾರಿ ನೌಕರರಿಗೆ ಲಭ್ಯವಿಲ್ಲದೇ ಇರುವುದು.

(v) ಜಾರಿಯಾದ ದಿನದಿಂದ ಯೋಜನೆಯಲ್ಲಿ ಆಗಿರುವ ಬದಲಾವಣೆಗಳನ್ನು ಕ್ರೋಢೀಕರಿಸಿ ಸದರಿ ಯೋಜನೆಯ ಉಪಯೋಗವನ್ನು ಸರಳಗೊಳಿಸಿ ಸುಧಾರಿಸುವುದು ಮತ್ತು ಅಗತ್ಯ ನಿಯಮಗಳನ್ನು ಅಳವಡಿಸುವ ಅವಶ್ಯಕತೆ ಇರುವುದು.

(vi) ಈಗಿನ ಹೆಚ್.ಆರ್.ಎಂ.ಎಸ್ ಅನ್ನು 6 ವರ್ಷಗಳ ಹಿಂದೆ ಅಭಿವೃದ್ಧಿಪಡಿಸಿರುವುದರಿಂದ, ಪ್ರಸಕ್ತ ಅತ್ಯಗತ್ಯ ವಿಷಯಗಳನ್ನು / ಸಮಸ್ಯೆಗಳನ್ನು ನಿವಾರಿಸಿಕೊಳ್ಳುವ ಸಲುವಾಗಿ ಇತ್ತೀಚಿನ ತಾಂತ್ರಿಕತೆಯನ್ನು ಬಳಸಿಕೊಳ್ಳುವ ಅಗತ್ಯತೆ ಇರುತ್ತದೆ.

(vii) ಮಾನವ ಸಂಪನ್ಮೂಲ ಯೋಜನೆಯನ್ನು ಮತ್ತಷ್ಟು ಸದೃಢ ಹಾಗೂ ಬಳಕೆದಾರರಿಗೆ ಹೆಚ್ಚು ಸುಲಭವಾಗುವಂತೆ ಉನ್ನತೀಕರಣ ಮಾಡಬೇಕಿದ್ದು ಅದನ್ನು ಈ ಕೆಳಗೆ ವಿವರಿಸಿದೆ.

(ಅ) ಎಲ್ಲಾ ಸರ್ಕಾರಿ ನೌಕರರು ಅವರ ಸೇವೆಗೆ ಸಂಬಂಧಿಸಿದ ವಿಷಯಗಳಲ್ಲಿ ಆನ್ ಲೈನ್ ನಲ್ಲಿ ಸೇವೆಗಳನ್ನು ಪಡೆಯಬಹುದಾಗಿದೆ.

(ಆ) ಇಲಾಖಾ ಸ್ವರೂಪ ರಚನೆ (Organogram structure) ಆಧರಿಸಿ ವೃಂದ – ಹುದ್ದೆಯ ಕೇಂದ್ರಿಕೃತ ದತ್ತಾಂಶವನ್ನು ಸೃಜಿಸುವುದು.

(ಇ) ಸರ್ಕಾರಿ ಆದೇಶಗಳನ್ನು ಆನ್ ಲೈನ್ ನಲ್ಲಿ ಜನರೇಟ್ ಮಾಡಿ ಪಡೆಯುವ ಮೂಲಕ ಬಡ್ತಿ / ಚಲನೆ / ವರ್ಗಾವಣೆ / ನೌಕರರ ಕಾರ್ಯ ಮುಕ್ತಿ ಇತ್ಯಾದಿಗಳನ್ನು ನಿಯಂತ್ರಣಗೊಳಿಸುವ ತಂತ್ರಗಾರಿಕೆ.

(ಈ) ವರ್ಕ್ ಫ್ಲೋ ಆಧಾರಿತ ವ್ಯವಸ್ಥೆಯಲ್ಲಿ ನೌಕರರಿಗೆ ಸಂಬಂಧಿಸಿದ ಹಲವಾರು ವ್ಯವಹಾರಗಳಿಗೆ, ಆನ್ ಲೈನ್ ಮೂಲಕ ಅನುಮೋದಿಸುವ ಸಾಮರ್ಥ್ಯ.

(ಉ) ನೌಕರರ ಸಂಬಳಗಳು ಹಾಗೂ ಪಿಂಚಣಿದಾರರ ಪಿಂಚಣಿಗೆ ಸಂಬಂಧಿಸಿದ ಆಯವ್ಯಯ ಅಂದಾಜುಗಳನ್ನು ಮುಂದಿನ 5 ವರ್ಷಕ್ಕಾಗಿ ತಯಾರಿಸುವ ಸಾಮರ್ಥ್ಯ.

(ಊ) ನೌಕರರಿಗೆ ಸಂಬಂಧಿಸಿದ ಕ್ಲೈಮ್ಸ್ ಬಿಲ್ಲುಗಳ ನಿರ್ವಹಣೆ, ಪ್ರತಿ ನಿಯೋಜನೆ ನಿರ್ವಹಣೆ, ಶಿಸ್ತಿನ ಕ್ರಮ, ನಿರ್ಗಮನ ನಿರ್ವಹಣೆ, ನಿವೃತ್ತಿ ಸೌಲಭ್ಯಗಳು ಇತ್ಯಾದಿ ವಿಷಯಗಳ ನಿರ್ವಹಣೆಗಾಗಿ ಮಾಡ್ಯೂಲ್ ಗಳು ಲಭ್ಯವಾಗುವ ಅನುಕೂಲ.

(ಋ) ರಜೆ, ವಿವಿಧ ಸಾಲ/ ಮುಂಗಡಗಳಿಗಾಗಿ ಅರ್ಜಿ ಹಾಕುವಿಕೆ ಇತ್ಯಾದಿ ಸೇವೆಗಳನ್ನು ಪಡೆಯಲು ಆನ್ ಲೈನ್ ಮೂಲಕ ಅನುಕೂಲತೆಯನ್ನು ಉಪಯೋಗಿಸಿಕೊಳ್ಳುವುದು.

(ಎ) ಖಜಾನೆ –II ಮತ್ತು ಕೆ.ಜಿ.ಐ.ಡಿ ಇತ್ಯಾದಿಗಳೊಂದಿಗೆ ಏಕೀಕೃತಗೊಳಿಸುವುದು (Integration)

(ಏ) ಪಿಂಚಣಿ ದಾಖಲಾತಿಗಳು ಆನ್ ಲೈನ್ ನಲ್ಲಿ ಸಲ್ಲಿಸುವುದು ಮತ್ತು ಸಾಮಾನ್ಯ ಭವಿಷ್ಯ ನಿಧಿ ಲೆಕ್ಕಗಳು ಹಾಗೂ ಇತರ ಹಲವಾರು ಮುಂಗಡ ಲೆಕ್ಕಗಳ ನಿರ್ವಹಣೆಯನ್ನು ಆನ್ ಲೈನ್ ನಲ್ಲಿ ಮಾಡಲು ಮಹಾಲೇಖಪಾಲರೊಂದಿಗೆ ಸಂಪರ್ಕ ಏರ್ಪಡಿಸುವ (Interface) ಸೌಲಭ್ಯ ಕಲ್ಪಿಸುವುದು.

6. **ಹೆಚ್.ಆರ್.ಎಂ.ಎಸ್ 2.0 ರ ವ್ಯಾಪ್ತಿ:** ಪ್ರಸಕ್ತ ಹೆಚ್.ಆರ್.ಎಂ.ಎಸ್ ಅನ್ನು ಹೆಚ್.ಆರ್.ಎಂ.ಎಸ್ 2.0 ಉನ್ನತೀಕರಣದಲ್ಲಿ ಕೆಳಗಿನ ಅಂಗಗಳು ಲಭ್ಯವಿರುತ್ತವೆ:–

   (I) ಪ್ರಸಕ್ತ ವ್ಯವಸ್ಥೆಯನ್ನು ಹೊಸ ತಾಂತ್ರಿಕ ವೇದಿಕೆಗೆ ವಲಸೆಯಾಗಿಸುವುದು ಮತ್ತು ಹೆಚ್ಚುವರಿ ಕಾರ್ಯಕ್ಷಮತೆಗಳನ್ನು (functionalities) ಅಭಿವೃದ್ಧಿಗೊಳಿಸುವುದು ಹಾಗೂ ಈ ಹೊಸ ಅನ್ವಯಿಕೆಯನ್ನು ಜಾರಿಗೆ ತರುವುದು.

   (II) ನೌಕರರನ್ನು ಹುದ್ದೆಗೆ–ವೃಂದಕ್ಕೆ ಮ್ಯಾಪಿಂಗ್ ಕಲ್ಪಿಸಲು ಕ್ಷೇತ್ರ ಮಟ್ಟದಿಂದ ನೌಕರರ ದತ್ತಾಂಶವನ್ನು ಸಂಗ್ರಹಿಸಿ organogram ರಚಿಸುವುದು.

   (III) ಹೆಚ್.ಆರ್.ಎಂ.ಎಸ್–2.0 ಅನ್ನು ಜಾರಿಗೆ ತರುವುದು ಮತ್ತು 5 ವರ್ಷಗಳ ವರೆಗೆ ನಿರ್ವಹಿಸುವುದು.

   (IV) ವ್ಯವಸ್ಥೆಯ ಸಾಮರ್ಥ್ಯವನ್ನು ಹೆಚ್ಚಿಸುವ ಸಲುವಾಗಿ ಮತ್ತು ಹೆಚ್ಚಿನ ಕಾರ್ಯದಕ್ಷತೆಯನ್ನು ಖಚಿತಪಡಿಸುವ ಸಲುವಾಗಿ ಹೊಸ ಹಾರ್ಡ್ ವೇರ್, ಡಾಟಾ ಬೇಸ್ ಮತ್ತು ಅಗತ್ಯ ಇನ್ನಿತರ ಸಾಫ್ಟ್ ವೇರ್ ಸಂಗ್ರಹಣೆ ಮತ್ತು ಅವುಗಳನ್ನು ಅಳವಡಿಸಿ ವಿಸ್ತಾರಗೊಳಿಸುವಿಕೆ.

7. **ಸಂಗ್ರಹಣೆ:** ಈಗ ಅಳವಡಿಸಲಾಗಿರುವ ಮತ್ತು ಚಾಲ್ತಿಯಲ್ಲಿರುವ ಬಹುತೇಕ ವ್ಯವಸ್ಥೆಯನ್ನೇ ಮುಂದುವರೆಸಿ ಅದರ ಕಾರ್ಯಚಟುವಟಿಕೆಗಳೇ ಪ್ರಸ್ತಾಪಿತ ಹೆಚ್.ಆರ್.ಎಂ.ಎಸ್ 2.0 ರಲ್ಲಿ ಒಂದು ಗಮನಾರ್ಹ ಅಂಶವಾಗಿದೆ. ಆದುದರಿಂದ, ಪ್ರಸಕ್ತ ಹೆಚ್.ಆರ್.ಎಂ.ಎಸ್ ವ್ಯವಸ್ಥೆಯನ್ನು ಕೈಬಿಟ್ಟು ಹೆಚ್.ಆರ್.ಎಂ.ಎಸ್ 2.0 ಯೋಜನೆಯನ್ನು ಪ್ರಾರಂಭದಿಂದ ಅಭಿವೃದ್ಧಿಗೊಳಿಸುವ ಬದಲಾಗಿ, ಹೆಚ್.ಆರ್.ಎಂ.ಎಸ್ ನಲ್ಲಿನ ಕಾರ್ಯಕ್ಷಮತೆಗಳನ್ನು (functionalities) ಕ್ರೋಢೀಕರಿಸಿ, ಅದನ್ನು ಹೆಚ್.ಆರ್.ಎಂ.ಎಸ್ 2.0ವನ್ನಾಗಿ ಉನ್ನತೀಕರಿಸುವುದು ಪ್ರಾಯೋಗಿಕವಾಗಿದೆ. ಕಳೆದ 6 ವರ್ಷಗಳಿಂದ ಹೆಚ್.ಆರ್.ಎಮ್.ಎಸ್ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಿರುವ ಮತ್ತು ನಿರ್ವಹಿಸುತ್ತಿರುವ ಮೆ॥ ಸಿ.ಎಂ.ಸಿ ಲಿಮಿಟೆಡ್ ರ ಮತ್ತು ಸರ್ಕಾರದ ನಡುವೆ ಉಂಟಾದ ವ್ಯಾಪಕ ಪರಸ್ಪರ ಅಧ್ಯಯನ ಮತ್ತು ಪರಿಶ್ರಮದ ಫಲಿತಾಂಶವೇ ಪ್ರಸ್ತುತ ಯಶಸ್ವಿನ ಹೆಚ್.ಆರ್.ಎಂ.ಎಸ್ ಆವೃತ್ತಿಯಾಗಿದೆ. ಹೀಗಾಗಿ ನೂತನ ಆವೃತ್ತಿಗೆ ಸಂಬಂಧಿಸಿದ ವ್ಯವಸ್ಥೆ ವಿಧಾನಗಳನ್ನು ಅಭಿವೃದ್ಧಿಗೊಳಿಸುವಲ್ಲಿ ನಿಪುಣತೆ ಮತ್ತು ಸರ್ಕಾರದಲ್ಲಿ ಮಾನವ ಸಂಪನ್ಮೂಲ ಸಂಬಂಧಿತ ಆಡಳಿತ ವಿಷಯಗಳಲ್ಲಿ ಅನುಭವವನ್ನು ಮೆ॥ ಸಿ.ಎಂ.ಸಿ ಲಿಮಿಟೆಡ್ ಹೊಂದಿರುತ್ತದೆ. ಹೊಸ ಹೆಚ್.ಆರ್.ಎಂ.ಎಸ್ 2.0 ಆವೃತ್ತಿಯನ್ನು ಅಭಿವೃದ್ಧಿಪಡಿಸುವ ಈ ದಿಸೆಯಲ್ಲಿ ಅವರ ಕಾರ್ಯಾನುಭವದ ಲಾಭವನ್ನು ಪಡೆಬಹುದಾಗಿದೆ. ಇದರಿಂದಾಗಿ ಆ ಸಂಸ್ಥೆ ಹೆಚ್.ಆರ್.ಎಂ.ಎಸ್ 2.0ನ್ನು ಕಡಿಮೆ ಅವಧಿಯಲ್ಲಿ ಅಭಿವೃದ್ಧಿಗೊಳಿಸಲು ಮತ್ತು ಜಾರಿಗೊಳಿಸಲು ಸಾಧ್ಯವಾಗುತ್ತದೆ. ಇದು ಹೊಸ ವ್ಯವಸ್ಥೆಗೆ ಸರಾಗವಾಗಿ ವಲಸೆಯಾಗುವುದರ ಜೊತೆಗೆ ವ್ಯವಹಾರ ಮುಂದುವರೆಸಲು ಸಹಕಾರಿಯಾಗುವುದು.

8. ಮೆ॥ ಸಿ.ಎಂ.ಸಿ ಲಿಮಿಟೆಡ್ ರವರಿಂದ ಪ್ರಸಕ್ತ ಮಾಹಿತಿ ತಂತ್ರಜ್ಞಾನ ಸೇವೆಗಳನ್ನು ಪಡೆದಿರುವುದರಿಂದ ಉತ್ಕೃಷ್ಟತೆ ಮತ್ತು ಯುಕ್ತತೆಯ ದೃಷ್ಟಿಯಿಂದ (for reasons of standardization and compatibility) ಅದೇ ಸಂಸ್ಥೆಯಿಂದಲೇ ಮಾಹಿತಿ ತಂತ್ರಜ್ಞಾನ ಸೇವೆಗಳನ್ನು ಪಡೆಯುವುದು ಸೂಕ್ತವೆಂದು, ಇತರರೊಂದಿಗೆ, ಐಐಐಟಿಬಿ, ಬೆಂಗಳೂರು ಮತ್ತು ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು, ಇವುಗಳ ತಜ್ಞರನ್ನೊಳಗೊಂಡ ಮೇಲೆ (4)ರಲ್ಲಿ ಓದಲಾದ ದಿನಾಂಕ: 04.02.2014ರ ಅಧಿಸೂಚನೆಯನ್ವಯ ರಚಿಸಲಾದ ತಾಂತ್ರಿಕ ಸಮಿತಿಯು, ಮೇಲೆ (5) ರಲ್ಲಿ ಓದಲಾದ ತನ್ನ ನಡವಳಿಗಳಲ್ಲಿ ಶಿಫಾರಸ್ಸು ಮಾಡಿದೆ.

9. **ಅನುಷ್ಠಾನಗೊಳಿಸುವ ಅವಧಿ:** ಹೆಚ್.ಆರ್.ಎಂ.ಎಸ್ 2.0 ಅಭಿವೃದ್ಧಿಪಡಿಸುವುದನ್ನು ಒಪ್ಪಂದಕ್ಕೆ ಸಹಿ ಹಾಕಿದ ದಿನಾಂಕದಿಂದ 15 ತಿಂಗಳಲ್ಲಿ ಪೂರ್ಣಗೊಳಿಸುವುದು ಮತ್ತು ಮುಂದಿನ 5 ವರ್ಷಗಳವರೆಗೆ ಅನುಷ್ಠಾನ ಮತ್ತು ನಿರ್ವಹಣೆ ಮಾಡಲು ಪ್ರಸ್ತಾಪಿಸಲಾಗಿದೆ.

10. **ಆರ್ಥಿಕ ತೊಡಕುಗಳು ಮತ್ತು ಹೆಚ್.ಆರ್.ಎಮ್.ಎಸ್ 2.0 ಯೋಜನೆಯ ವೆಚ್ಚ:** ಹೆಚ್.ಆರ್.ಎಂ.ಎಸ್ 2.0 ಅಭಿವೃದ್ಧಿಪಡಿಸುವಿಕೆ ಮತ್ತು ಇದರ ಅನುಷ್ಠಾನ ಮತ್ತು 5 ವರ್ಷಗಳ ನಿರ್ವಹಣೆಗಾಗಿ ಒಟ್ಟು ವೆಚ್ಚ ರೂ. 2729.70 ಲಕ್ಷಗಳು ಆಗುವುದಾಗಿ ಈ ಕೆಳಗೆ ನಮೂದಿಸಿದಂತೆ ಅಂದಾಜಿಸಲಾಗಿದೆ:–

| ಅಂಶ | ವಿವರಗಳು | ಅಂದಾಜಿಸಲಾದ ಒಟ್ಟು ಖರ್ಚು (ರೂ. ಲಕ್ಷಗಳಲ್ಲಿ) | | |
|---|---|---|---|---|
| | | ಅಂಶ ವೆಚ್ಚ | ಅನ್ವಯವಾಗುವ ತೆರಿಗೆ | ಒಟ್ಟು ಮೊತ್ತ |
| 1. | ವ್ಯವಸ್ಥೆ ಅಭಿವೃದ್ಧಿಪಡಿಸುವಿಕೆ ಮತ್ತು ವಿಸ್ತರಣೆ ಮತ್ತು ತರಬೇತಿ | 345.56 | 42.71 | 388.27 |
| 2. | ಡಾಟಾ ಸಂಗ್ರಹಣೆ ಮತ್ತು organogram ರಚನೆ | 27.00 | 3.37 | 30.37 |
| 3(ಎ). | ಅನುಷ್ಠಾನ ಮತ್ತು ಮೊದಲ 3 ವರ್ಷಗಳವರೆಗೆ ವ್ಯವಸ್ಥೆ ನಿರ್ವಹಣೆ | 195.00 | 24.10 | 219.10 |
| 3(ಬಿ). | ಅನುಷ್ಠಾನ ಮತ್ತು 4 ಮತ್ತು 5 ನೇ ವರ್ಷದಲ್ಲಿ ವ್ಯವಸ್ಥೆ ನಿರ್ವಹಣೆ | 162.50 | 20.10 | 182.60 |
| 4. | ಹಾರ್ಡ್ ವೇರ್, ಸಿಸ್ಟಂ ಸಾಫ್ಟ್ ವೇರ್ ಸಂಗ್ರಹಣೆ ಮತ್ತು ಆರ್.ಡಿ.ಬಿ.ಎಂ.ಎಸ್ ಪರವಾನಗಿಗಳನ್ನು ಪಡೆಯುವುದು. | 1632.96 | 276.40 | 1909.36 |
| | ಒಟ್ಟು | 2363.02 | 366.68 | 2729.70 |

11. ಅಂದಾಜು ಮಾಡಿರುವ ವೆಚ್ಚ ರೂ. 2729.70 ಲಕ್ಷಗಳ ಪೈಕಿ. ಹೆಚ್.ಆರ್.ಎಂ.ಎಸ್ 2.0 ನ್ನು ಅಭಿವೃದ್ಧಿ ಪಡಿಸುವುದಕ್ಕೆ 13ನೇ ಆರ್ಥಿಕ ಆಯೋಗ ಅನುದಾನಗಳ ಅಡಿಯಲ್ಲಿ ರೂ. 750-00 ಲಕ್ಷಗಳ ಅನುದಾನ ಲಭ್ಯವಿರುತ್ತದೆ. ಉಳಿದ ರೂ. 1979.7 ಲಕ್ಷಗಳ ವೆಚ್ಚವನ್ನು ಮುಂದಿನ 6 ವರ್ಷಗಳ ಅವಧಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)ಗೆ ಒದಗಿಸಲಾಗುವ ಯೋಜನಾ ಆಯವ್ಯಯ ಮೂಲದಿಂದ ಭರಿಸಲಾಗುವುದು. ಮೇಲೆ ತಿಳಿಸಿದ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಇ ಜಿ ಎಂ 2014, ಬೆಂಗಳೂರು, ದಿನಾಂಕ:4ನೇ ಸೆಪ್ಟೆಂಬರ್ 2014.**

12. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತುತ ಹೆಚ್.ಆರ್.ಎಂ.ಎಸ್ ಆವೃತ್ತಿಯನ್ನು ಉನ್ನತೀಕರಿಸುವ ಮೂಲಕ ಹೆಚ್.ಆರ್.ಎಂ.ಎಸ್ 2.0ನ್ನು, ಮುಂದಿನ 6 ವರ್ಷಗಳ ಅವಧಿಯಲ್ಲಿ, ಒಟ್ಟು ರೂ. 2729.70 ಲಕ್ಷಗಳ (ರೂ. ಇಪ್ಪತ್ತೇಳು **ಕೋಟಿ ಇಪ್ಪತ್ತೊಂಭತ್ತು ಲಕ್ಷ ಎಪ್ಪತ್ತು ಸಾವಿರ**) ವೆಚ್ಚದಲ್ಲಿ ಜಾರಿಗೊಳಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

13. ಮುಂದುವರೆದು, ಹೆಚ್.ಆರ್.ಎಂ.ಎಸ್ 2.0 ಅನ್ನು ಅಭಿವೃದ್ಧಿಗೊಳಿಸುವುದು (development of HRMS 2.0) (ಅಂಶ (1)), ಕಾರ್ಯಕ್ಷೇತ್ರ ಮಟ್ಟದ ದತ್ತಾಂಶ ಸಂಗ್ರಹಣೆ ಮತ್ತು ಸಂಸ್ಥೆ ರಚನಾ ನಿರೂಪಣೆ (collection of field level data and building of organogram,) (ಅಂಶ (2)} ಮತ್ತು ಅದರ ಅನುಷ್ಠಾನಗೊಳಿಸುವಿಕೆ ಹಾಗೂ 5 ವರ್ಷಗಳವರೆಗೆ ವ್ಯವಸ್ಥೆ ನಿರ್ವಹಣೆ (Operation and Maintenance of application for 5 years) (ಅಂಶ (3)) ಅನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಸೆಕ್ಷನ್ 4(ಸಿ) ರೀತ್ಯ ಮೆ॥ ಸಿ.ಎಂ.ಸಿ ಲಿಮಿಟೆಡ್ ಇವರಿಗೆ ವಹಿಸಲೂ ಸಹ ಈ ಮೂಲಕ ಮಂಜೂರಾತಿ ನೀಡಿದೆ. ಹಾರ್ಡ್ವೇರ್ ಸಂಗ್ರಹಣೆ ಮತ್ತು ಅಗತ್ಯವಾಗಿ ಬೇಕಾಗಿರುವ ಡಾಟಾ ಬೇಸ್ ಗಳನ್ನು ಮತ್ತು ಇತರ ಸಿಸ್ಟಂ ಸಾಫ್ಟ್ ವೇರ್ (hardware and the required databases and other system software) (ಅಂಶ (4)), ಇವುಗಳನ್ನು ಸದರಿ ಅಧಿನಿಯಮದ ರೀತ್ಯ ಮುಕ್ತ ಟೆಂಡರ್ ಪ್ರಕ್ರಿಯೆ ಮೂಲಕ ಸಂಗ್ರಹಿಸಲು ಕ್ರಮ ಕೈಗೊಳ್ಳತಕ್ಕದ್ದು.

14. ಮೆ॥ ಸಿ.ಎಂ.ಸಿ ನಿಯಮಿತ ಇವರೊಂದಿಗಿನ ಕರಾರು ಒಪ್ಪಂದಕ್ಕೆ ಸಹಿ ಮಾಡಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ-ಆಡಳಿತ ಕೇಂದ್ರ ಇವರನ್ನು ಈ ಮೂಲಕ ಅಧಿಕೃತಗೊಳಿಸಲಾಗಿದೆ.

15. ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "3451-00-090-2-04-059- ಇ-ಆಡಳಿತ (ಯೋಜನೆ)" ಮತ್ತು "2052-00-090-2-24 XIII ಎಫ್.ಸಿ.ಜಿ-ನೌಕರರ ಮತ್ತು ಪಿಂಚಣಿದಾರರ ದತ್ತಾಂಶ 102-ಸಹಾಯಾನುದಾನ ಆಸ್ತಿ ಸೃಜನೆ (ಯೋಜನೇತರ)" ಗೆ ಖರ್ಚು ಹಾಕತಕ್ಕದ್ದು.

16. ಆರ್ಥಿಕ ಇಲಾಖೆಯ ದಿನಾಂಕ: **08.05.2014ರ** ಟಿಪ್ಪಣಿ ಸಂಖ್ಯೆ:ಆಇ/ಪ್ರಕಾ/ಕೆ-II/ ಎಲ್.ಎಂ.ಎಸ್-8580/2014 **ಮತ್ತು ನಂತರದ ದಿನಾಂಕ: 01.09.2014ರ ಟಿಪ್ಪಣಿ ಸಂಖ್ಯೆ: ಆಇ 783 ವೆಚ್ಚ-12/2014** ಗಳನ್ವಯ ಆರ್ಥಿಕ ಇಲಾಖೆ ನೀಡಿದ ಸಹಮತಿಯಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ವೀಣಾ**

ಪೀಠಾಧಿಕಾರಿ -1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಇ-ಆಡಳಿತ).

## PERSONNEL AND ADMINISTRATIVE REFORMS SECRETARIAT

**Subject:** Sanction for upgradation of Human Resource Management System (HRMS) to HRMS 2.0 version.

**Read:**

(1) Government order No: FD 8 GIE 2003 dated 30.03.2005.

(2) Government order No: FD37 PMU2006 dated 07.07.2006.

(3) Government order No: DPAR 25 EGV 2006(P 2) dated 14.11.2006.

(4) Notification No: CeG/29/HRMS/2012 dated 04.02.2014 issued by the Chief Executive Officer, Centre for e-Governance, Bengaluru.

(5) Proceedings of the meeting of the committee constituted as per the notification No: CeG/29/HRMS/2012 dated 05.02.2014.

**Preamble** :

**1.** Sanction was accorded for awarding the Consultancy Contract for development of Computerized Human Resource Management System (referred to as HRMS, now onwards) to M/s CMC ltd., Bengaluru as per the Government order dated 30.03.2005, read at (1) above. By the G.O. dated 07.07.2006, read at (2) above, HRMS project was transferred from Finance Department to the Department of Personnel and Administrative Reforms (e-Governance). By the subsequent Government order dated 14.11.2006 read at(3) above, Govt. has accorded sanction for designating the Centre for e-Governance as the agency for implementing the HRMS project.

**2.** HRMS, developed and maintained by the Department of Personnel and Administrative Reforms (e-Governance) has been servicing payroll generation of all the 5.5 lakh employees of the State Government and around 1 lakh employees of aided

educational institutions and some of the boards and corporations and maintenance of their service particulars. With a view to provide additional functionalities and also the essential technology upgrade required, Government has considered the need to upgrade the HRMS solution to Human Resource Management System 2.0 version (referred to as HRMS 2.0, now onwards).

3. **Background:** HRMS was introduced during 2007 with the objective to create human resource database and systems to assist data processing of employee related expenses and to provide cadre management information for day-to-day decision making as well as for future planning. This electronic platform has been developed and maintained using the services of M/s CMC Ltd, selected as per the provisions of the Karnataka Transparency in Public Procurements Act, 1999 (referred to as KTPP Act, now onwards).

4. HRMS has enabled complete tracking of various pay and allowances of all employees, thus, providing a centralized repository of entire pay and allowance related expenditure of the Government. HRMS has also created a platform for centralized consolidation of service particulars and all the related Human Resources Information pertaining to all the employees of the State, thus, providing cadre management information for transfers, promotions and forward planning.

5. The current version of HRMS, needs a technological and functional upgrade, to enable more benefits to Government as well as employees. Following are some of the key reasons for upgrade of HRMS to HRMS 2.0 version:-

   (i) Lack of ability to generate budgetary estimates for the salaries of the employees, as HRMS is based on working strength, rather than cadre-post strength.

   (ii) Lack of work-flow in the application, as a result of which real time data is not available on employees' service particulars, as currently data is entered after the event.

   (iii) Non availability of interfaces to the external IT systems such as Khajane, Accountant General, etc.

   (iv) Non availability of services to the employees, such as forms of application seeking sanction of leave, advances, pension and updating of their basic details.

   (v) Need for consolidating the changes made in the application over a period of time, to improve ease of use and to bring in necessary validations.

   (vi) Need to adopt the latest technology for addressing obsolescence concerns as the current HRMS was developed more than 6 years back.

   (vii) It is required to add additional functionalities to make HRMS application robust and user friendly as detailed below.

   (a) Online access to all the employees to access service related matters.

   (b) Creation of a Cadre-Post centric employee database, based on organogram structure.

   (c) Mechanism for controlling the promotion/movement/ transfers/ relief of employees by enabling generation of the Government orders online.

   (d) Workflow based system to enable online approvals of various employee related transactions.

   (e) Generation of budgetary estimates towards salaries of employees and also estimates towards pensions for five years.

   (f) Modules for management of all the HR related issues concerning employees such as claims management, deputation management, disciplinary action, exit management, retirement benefits etc.

   (g) Online access to employees to avail services such as leave, applying for various loans/advances etc.

   (h) Integration with Khajane II, KGID etc.

   (i) Interfaces to Accountant General for online submission of pension documents and also for managing GPF and other various advances.

6. **Scope of HRMS 2.0:** Upgradation of HRMS to HRMS 2.0 will have the following components.

   i. Migration of the application to new technology platform and development of the additional functionalities and deployment of the application

   ii. Mapping the employees to Post – Cadre through field level data collection and building of the organogram.

   iii. Operation and Maintenance of HRMS 2.0 application for a period of 5 years

   iv. Procurement and deployment of the new hardware, database and other required software, to augment the capacity of the system and ensure more efficient operation.

7. **Procurement:** The current application is widely adapted and its functionalities will form a significant portion of proposed HRMS 2.0. Instead of developing HRMS 2.0 from scratch, it will be practical to consolidate functionalities of HRMS and to develop HRMS 2.0 as the upgrade of HRMS. The current successful version HRMS is the result of extensive interaction between the Government and the current vendor, i.e., M/s CMC Ltd, who has developed and maintained the application for the last 6 years. Thus, CMC Ltd. has considerable expertise in developing HR related application and also experience of HR related governance issues in the Government. Having CMC Ltd for the development of new version has the benefit of leveraging this experience and also reduce

time for development and deployment of HRMS 2.0. This will also ensure smooth migration to new application and ensure business continuity.

**8.** Having procured IT solution, technology and services from M/s CMC Ltd it is found necessary to procure the IT solution and services from the same vendor for reasons of standardization and compatibility with the existing IT solution and services, as recommended by the committee constituted as per the notification dated 04.02.2014, read at (4) above, comprising, among others, experts from IIIT, Bengaluru and Indian Institute of Science, Bengaluru, in its proceedings, read at (5) above.

**9.** **Implementation Period:** It is proposed to complete the development of HRMS 2.0 over a period of 15 months, from the date of signing the contract, followed by 5 years of operation and maintenance phase.

**10.** **Financial Implications and Funding of HRMS 2.0:** The total cost of the development of HRMS 2.0 and its operation and maintenance for 5 years is estimated to be Rs. 2729.70 lakhs as specified below:-

| **Component** | **Details** | **Total estimated cost (` Lakhs)** | | |
|---|---|---|---|---|
| | | **Component cost** | **Applicable Tax** | **Total Amount** |
| 1 | Development of application and Deployment &training | 345.56 | 42.71 | 388.27 |
| 2 | Data collection and building organogram | 27.00 | 3.37 | 30.37 |
| 3a. | Operation and Maintenance of application for first 3 years | 195.00 | 24.10 | 219.10 |
| 3b. | Operation and Maintenance of application for 4th and 5th year | 162.50 | 20.10 | 182.60 |
| 4 | Procurement of Hardware, System software and RDBMS Licenses | 1632.96 | 276.4 | 1909.36 |
| | **Total** | **2363.02** | **366.68** | **2729.70** |

**11.** Of the estimated cost of Rs. 2729.70 lakhs, a provision of Rs. 750 .00 lakhs is available, under the Thirteenth Finance Commission grants for development of HRMS 2.0. The balance requirement of Rs. 1979.7 lakhs would be met out of the budget provision available to the Department of Personnel and Administrative Reforms (e-Governance) under plan over a period of 6 years. In view of the above, the following is ordered.

### Government Order No: DPAR 21 EGM 2014,Bengaluru dated:4th September 2014

**12.** Under the circumstances explained in the preamble, Government hereby accords sanction for implementation of HRMS 2.0 at a total cost of Rs. 2729.70 lakhs (Rs. Twenty seven crore twenty nine lakhs seventy thousand), to be spent over a period of 6 years by upgrading the existing HRMS version.

**13.** Further, sanction is also accorded to entrust the development of the HRMS 2.0 {component (i)}, Collection of field level data and building of organogram, {component (ii)} and Operation and Maintenance of application for 5 years, {component (iii)} to M/s CMC Ltd, in accordance with section 4(c) of Karnataka Transparency in Public Procurements Act, 1999. The procurement of the hardware and the required databases and other system software {component (iv)} shall be done through open tender process, as per the provisions of the said Act.

**14.** The Chief Executive Officer, Centre for e-Governance is hereby authorized to sign the Contract Agreement with M/s CMC Ltd., Bengaluru.

**15.** The expenditure on this account shall be debited to the head of account "3451-00-090-2-04-059-e-Governance (Plan)" and "2052-00-090-2-24 XIII FCG-Employee and Pensioners Data Base 102-Grants in Aid Assets Creation (Non Plan)".

**16.** This order is issued with the concurrence of Finance Department as conveyed by its note No: FD/Prs/K-II/LMS-8580/2014 dated 08.05.2014 and its subsequent note No:FD/783/Exp-12/2014 dated 01.09.2014.

By Order and in the name of the Governor of Karnataka

**S.Veena**
Desk Officer-1
Dept. of Personnel & Administrative Reforms
(e-Governance).

**P.R. 661**
**SC-500**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಸಂಸ್ಥೆ (ಎಸ್.ಎಲ್.ಎನ್.) ಕೋಟೆ, ಬೆಂಗಳೂರು ಈ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ, ಪರಿಷ್ಕೃತ ನಿಯಮಗಳನ್ವಯ ಆಡಳಿತ ಸಮಿತಿಯನ್ನು ರೂಪಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಆರ್‌ಡಿ 77 ಎಂ.ಇ.ಟಿ.2003 ದಿನಾಂಕ: 30.04.2003.
2. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಆರ್‌ಡಿಪಿ/ಟಿಆರ್‌ಐ/87/2012–13 ದಿನಾಂಕ: 12.05.2014.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 40 ಮುಸೇವಿ 2014 ದಿನಾಂಕ: 14–07–2014.
4. ಸರ್ಕಾರದ ಆದೇಶ ಸಂಖ್ಯೆ:ಕಂಇ 40 ಮುಸೇವಿ 2014 ದಿನಾಂಕ: 28.07.2014.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ: 30.04.2003ರಲ್ಲಿ ಬೆಂಗಳೂರು ನಗರ, ಕೋಟೆ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಸಂಸ್ಥೆಯನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ ಸಂಖ್ಯೆ:33) ರ ಪ್ರಕರಣ 23ರಡಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸಲಾಗಿತ್ತು.

ಮೇಲೆ ಓದಲಾದ (2)ರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ ಬೆಂಗಳೂರು, ಕೋಟೆ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಕುರಿತು ಹಾಗೂ ಈ ಸಂಸ್ಥೆಯು ಕೋಟ್ಯಾಂತರ ರೂಪಾಯಿ ಆಸ್ತಿಗಳನ್ನು ಹೊಂದಿದ್ದು, ಸಾರ್ವಜನಿಕ ಆಸ್ತಿ ಸದುಪಯೋಗ ಮಾಡಿ ದಾನಿಗಳ ಇಚ್ಛೆಯಂತೆ ಟ್ರಸ್ಟ್ ಡೀಡ್‌ನ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಈಡೇರಿಸುವ ಉದ್ದೇಶದಿಂದ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, 1997 ಜಾರಿಗೆ ಪೂರ್ವದಲ್ಲಿದ್ದ, ನಿಯಮಾವಳಿಗಳ ಮಾದರಿಯಲ್ಲಿ ಹೊಸ ನಿಯಮಾವಳಿಗಳನ್ನು ಜಾರಿಗೆ ತಂದು, ಸರ್ಕಾರದ ಮಿತ ನಿಯಂತ್ರಣದಲ್ಲಿ ಸಂಸ್ಥೆಯ ಆಡಳಿತವನ್ನು ನಡೆಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ ಹಿನ್ನಲೆಯಲ್ಲಿ, ಮೇಲೆ ಓದಲಾದ (3)ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ಧರ್ಮಸಂಸ್ಥೆಯು ಒಂದು ಧಾರ್ಮಿಕ ಸಂಸ್ಥೆ ಅಥವಾ ದೇವಸ್ಥಾನವಾಗಿರದೇ ಇದೊಂದು ಧರ್ಮಸಂಸ್ಥೆ ಆಗಿರುವುದರಿಂದ ಮತ್ತು ಅಧಿನಿಯಮದ ಪ್ರಕರಣ 35(1) ರನ್ವಯ **"ಒಂದು ಧಾರ್ಮಿಕ ವರ್ಗವು ಸ್ಥಾಪಿಸಿದ, ಸಂಘಟಿಸಿದ, ನಡೆಸುವ ಅಥವಾ ನಿರ್ವಹಿಸುವ ಯಾವುದೇ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಗೆ ಕಾಯ್ದೆಯ ಅಧ್ಯಾಯ VIII ನ್ನು ಹೊರತುಪಡಿಸಿ, ಉಳಿದ ಉಪಬಂಧಗಳು ಅನ್ವಯವಾಗುವುದಿಲ್ಲ"** ಎಂಬ ಉಪಬಂಧವಿರುವುದರಿಂದ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, 1997 ಪ್ರಕರಣ 23 ರನ್ವಯ ಪ್ರಕಟವಾಗಿರುವ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಬೆಂಗಳೂರು ನಗರ ಜಿಲ್ಲೆಯ **ಬೆಂಗಳೂರು ಕೋಟೆ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಸಂಸ್ಥೆಯನ್ನು ಆದೇಶಿಸಲಾಗಿತ್ತು.**

ಮೇಲೆ ಓದಲಾದ (4)ರಲ್ಲಿ, ಬೆಂಗಳೂರು ನಗರ, ಕೋಟೆ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಸಂಸ್ಥೆಗೆ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997 ಜಾರಿಗೆ ಬರುವ ಪೂರ್ವದಲ್ಲಿದ್ದ ನಿಯಮಾವಳಿಗಳ ಮಾದರಿಯಲ್ಲಿ ಹೊಸ ಪರಿಷ್ಕೃತ ನಿಯಮಾವಳಿಗಳನ್ನು ರಚಿಸಿ, ಅನುಮೋದಿಸಿ ಆದೇಶಿಸಲಾಗಿತ್ತು.

ಆದ್ದರಿಂದ, ಸರ್ಕಾರದ ಆದೇಶ ಸಂಖ್ಯೆ:ಕಂಇ 40 ಮುಸೇವಿ 2014 ದಿನಾಂಕ:28.07.2014ರ ಆದೇಶದಲ್ಲಿನ ನಿಯಮಾವಳಿಯಂತೆ ಆಡಳಿತ ಸಮಿತಿಯನ್ನು ರಚಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 40 ಮುಸೇವಿ 2014, ಬೆಂಗಳೂರು, ದಿನಾಂಕ: 07ನೇ ಆಗಸ್ಟ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ, ಕೋಟೆ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ಧರ್ಮ ಸಂಸ್ಥೆಗೆ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, 1997 ಜಾರಿಗೆ ಬರುವ ಪೂರ್ವದಲ್ಲಿದ್ದ ನಿಯಮಾವಳಿಗಳ ಮಾದರಿಯಲ್ಲಿ ಹೊಸ ಪರಿಷ್ಕೃತ ನಿಯಮಾವಳಿಗಳನ್ನು ರೂಪಿಸಿ ಆದೇಶಿಸಿರುವಂತೆ, ಸದರಿ ನಿಯಮಾವಳಿಗಳಲ್ಲಿರುವ ಷರತ್ತುಗಳಿಗೊಳಪಟ್ಟು ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ 04 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಕಂಡಂತೆ ಆಡಳಿತ ಸಮಿತಿಯನ್ನು ರಚಿಸಿ ಆದೇಶಿಸಿದೆ.

| ಕ್ರ.ಸಂ. | ಹೆಸರು | ವಿಳಾಸ ಮತ್ತು ದೂರವಾಣಿ | ಹುದ್ದೆ |
|---|---|---|---|
| | | ಸಮುದಾಯದ ಸದಸ್ಯರು–07 | |
| 1. | ಶ್ರೀ ಎನ್. ಶ್ರೀನಿವಾಸ. ಬಿ.ಕಾಂ.,<br>ಮಾಜಿ ಅಧ್ಯಕ್ಷರು<br>ಅಖಿಲ ಕರ್ನಾಟಕ ಗಾಣಿಗರ ಸಂಘ | ನಂ. 208, 2ನೇ ಮೈನ್ ರೋಡ್ ಮಹಾಲಕ್ಷ್ಮಿ ಲೇಔಟ್,<br>ಬೆಂಗಳೂರು–560086<br>ಮೊ:9900192222 | ಅಧ್ಯಕ್ಷರು |
| 2. | ಡಾ: ಮುನಿಸಂಪಂಗಿ ರಾಮಯ್ಯ,<br>ಎಂಎಸ್ಸಿ. ಜಿಯಾಲಜಿಸ್ಟ್ | ನಂ. 81/4, ಗೋವಿಂದಪ್ಪ ರಸ್ತೆ, ಬಸವನಗುಡಿ,<br>ಬೆಂಗಳೂರು–560004 | ಸದಸ್ಯರು |
| 3. | ಶ್ರೀ ಎ. ಗೋಪಿನಾಥ. ಬಿ.ಇ., | ನಂ.20, ದಿಣ್ಣೂರ್ ಮುಖ್ಯರಸ್ತೆ,<br>ಆರ್.ಟಿ.ನಗರ, ಬೆಂಗಳೂರು–560032<br>ಮೊ:9845039339 | ಸದಸ್ಯರು |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ. | ಹೆಸರು | ವಿಳಾಸ ಮತ್ತು ದೂರವಾಣಿ | | ಹುದ್ದೆ |
|---|---|---|---|---|
| 4. | ಶ್ರೀ ವಿ.ಎನ್.ಅರುಣ್ ಕುಮಾರ್. ಬಿ.ಇ., | ನಂ.299, 17ನೇ ಮುಖ್ಯರಸ್ತೆ, 4ನೇ ಟಿ ಬ್ಲಾಕ್, ಜಯನಗರ, ಬೆಂಗಳೂರು–560041 ಮೊ:984532605 | | ಸದಸ್ಯರು |
| 5. | ಶ್ರೀ ಎಸ್. ಹರಿಪ್ರಸಾದ್, ಬಿ.ಇ., ತಂದೆ ಶ್ರೀ ಎಂ.ಎಸ್. ಶ್ರೀನಿವಾಸಮೂರ್ತಿ | ನಂ. 214, 13ನೇ ಮೈನ್,53ನೇ ಕ್ರಾಸ್ 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–560010<br>ದೂ:080–23153080 | | ಸದಸ್ಯರು |
| 6. | ಶ್ರೀ ಎ. ವೆಂಕಟರಾಮಯ್ಯ ಮುಖ್ಯೋಪಾಧ್ಯಾಯರು (ನಿ) | ಎಂಐಜಿ–14, ಕೆ.ಹೆಚ್.ಬಿ. ಕಾಲೋನಿ, ನ್ಯಾಷನಲ್ ಕಾಲೇಜು ಎದುರು, ಬಾಗೇಪಲ್ಲಿ ಟೌನ್, ಚಿಕ್ಕಬಳ್ಳಾಪುರ ಜಿಲ್ಲೆ, ಮೊ:9902984609 | | ಸದಸ್ಯರು |
| 7. | ಶ್ರೀ ವಿ.ನಾರಾಯಣ ಶೆಟ್ಟಿ, ರಿಟೈರ್ಡ್ ಪ್ರೊಡಕ್ಷನ್ ಫೋರ್‌ಮನ್(ಬಾಷ್) | ನಂ. 1869/2, 20ನೇ ಮೈನ್, 20ನೇ ಕ್ರಾಸ್, ಎಂ.ಸಿ.ಲೇಔಟ್, ವಿಜಯನಗರ, ಬೆಂಗಳೂರು–40, ಮೊ:9481102719 | | ಸದಸ್ಯರು |
| **ಇತರೆ ಸಮುದಾಯದ ಸದಸ್ಯರು–03** | | | | |
| 8. | ಶ್ರೀ ಜೆ. ಹುಚ್ಚಪ್ಪ, ಮಾಜಿ ಮಹಾಪೌರರು, ಬಿ.ಬಿ.ಎಂ.ಪಿ. ಬೆಂಗಳೂರು | ಮನೆ ನಂ. 2382, 13ನೇ ಮೈನ್, 'ಎ' ಬ್ಲಾಕ್, ರಾಜಾಜಿನಗರ, 2ನೇ ಹಂತ, ಬೆಂಗಳೂರು–10 | ಕುರುಬ ಸಮಾಜ (ಶ್ರೀಎಂ.ಆರ್.ಸೀತಾರಾಂ. ಎಂ.ಎಲ್.ಸಿ) | ಸದಸ್ಯರು |
| 9. | ಶ್ರೀ ಕೆ.ಎಂ.ಶಿವರಾಮಯ್ಯ ಪೊಲೀಸ್ ಇನ್ಸ್‌ಪೆಕ್ಟರ್(ನಿ) | ನಂ.9, 1ನೇ ಮುಖ್ಯ ರಸ್ತೆ, 1ನೇ ಕ್ರಾಸ್, ಲಾಲಾಜಿನಗರ, ಲಕ್ಕಸಂದ್ರ, ಬೆಂಗಳೂರು–30 ಮೊ:9845075475 | ಬಲಿಜ ಸಮಾಜ (ಶ್ರೀ ರಾಮಲಿಂಗಾ ರೆಡ್ಡಿ, ಮಾನ್ಯ ಸಾರಿಗೆ ಸಚಿವರು ಹಾಗೂ ಬೆಂ.ನಗರ ಜಿಲ್ಲಾ ಉಸ್ತುವಾರಿ ಸಚಿವರು) | ಸದಸ್ಯರು |
| 10. | ಶ್ರೀ ಎಸ್. ಪ್ರಕಾಶ್ | ನಂ.20/2, ಎ.ಎಮ್.ರಸ್ತೆ, ಎಸ್.ಜೆ.ಪಿ. ರೋಡ್ ಕ್ರಾಸ್, ತಿಗಳರ ಪೇಟೆ, ಬೆಂಗಳೂರು–02 | ತಿಗಳರ ಸಮಾಜ (ಶ್ರೀ ಆರ್.ವಿ. ದೇವರಾಜ್. ಶಾಸಕರು ಚಿಕ್ಕಪೇಟೆ) | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ.ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಮುಜರಾಯಿ)

**PR.687**

**SC- 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59